# ಅತ್ರಿಸೂನು ಉವಾಚ

## ಚುಟುಕುಗಳು



ಜಿ. ಟಿ. ನಾರಾಯಣರಾವ್




ವೈದ್ಯವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು - 570 008 ☎ : 2485959

# ಅತ್ರಿಸೂನು ಉವಾಚ

## ಚುಟುಕುಗಳು

ಜಿ. ಟಿ. ನಾರಾಯಣರಾವ್




ವೈದ್ಯವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು - 570 008 ☎ 2485959

***ATHRISUNU UVACHA*** **:** Collection of selected quatra
written by G.T. Narayana Rao, and published
Dr. M.G.R. Urs, for Vaidyavartha Prakashar
Vidyaranyapuram, Mysore - 570 008 Ph : 0821-248595



ಪ್ರಥಮ ಮುದ್ರಣ : 2008

ಪ್ರತಿಗಳು : 1000

ಪುಟಗಳು : 56

ಬೆಲೆ : ರೂ. 30

ಅಕ್ಷರ ವಿನ್ಯಾಸ : ಅರಸ್ ಡಿ.ಟಿ.ಪಿ. ☎ : 2485959

ಮುದ್ರಕರು : ಗುಪ್ತಾ ಆಫ್‌ಸೆಟ್ ಪ್ರಿಂಟರ್ಸ್,
ಮೈಸೂರು. ☎ : 2482023

# ಜಿಟಿಎನ್ ವ್ಯಕ್ತಿತ್ವ ಮುದ್ರೆ

ನಾರಾಯಣರಾವ್ ಎಂಬ ಸನ್ನಾಮದ ಮಿತ್ರರು ಹಲವರುಂಟು. ಆದರೆ ಗ್ರೇಟ್ ಟ್ಯಾಲೆಂಟೆಡ್ ಎಂಬ ಪದಗಳೇ ಮೂಲಾಕ್ಷರಗಳಿರುವ ನಾರಾಯಣರಾವ್ ಕರ್ನಾಟಕಕ್ಕೊಬ್ಬರೇ! ವಿಜ್ಞಾನ, ಕಾವ್ಯ, ಗಾನ, ಸುಜ್ಞಾನ-ಪ್ರತಿಭೆಗಳೆಂಬ ನಾಲ್ಕೊಗಗಳು ಏಕತ್ರ ಮೇಳವಿಸಿರುವ ಪ್ರಬುದ್ಧರನ್ನು ಹುಡುಕುವಾಗ ಸಿಗುವವರು ಇವರೊಬ್ಬರೇ.

ಸರ್ಕಾರದ ಇಲಾಖೆಯ ಮರದ ಗೂಡುಗಳಲ್ಲಿ ಹತ್ತಾರು ವರ್ಷಗಳಿಂದ ಧೂಳ್ಹಿಡಿದು ಗಾಢ ನಿದ್ರೆಯಲ್ಲಿದ್ದಂತಿದ್ದ ವಿಶ್ವಕೋಶವನ್ನು ಮಧ್ಯರಾತ್ರಿಯಲ್ಲಿ ಹೊತ್ತು ತಂದದ್ದಾಯಿತು. ಆಗಿನ ಭಾವಾವಿಷ್ಟ ಸ್ಥಿತಿಯಲ್ಲಿ ವಿದ್ಯಾಮಂತ್ರಿ ಶ್ರೀ ಶಂಕರಗೌಡರಿಗೆ ಕೇವಲ ಒಂದು ವರ್ಷದಲ್ಲಿ ಪ್ರಥಮ ಸಂಪುಟವನ್ನು ಬಿಡುಗಡೆ ಮಾಡುವುದಾಗಿ ವಾಗ್ದಾನ ಮಾಡಿದ್ದಾಯಿತು. ಭಾವಾವೇಶವಿಳಿದು, ವಿವೇಕ ಮರುಕೊಳಿಸಿದಾಗ, ವಾಗ್ದಾನವನ್ನುಳಿಸಿಕೊಳ್ಳುವುದು ಸಾಧ್ಯವೆ ಎಂದು ತಳಮಳಗೊಂಡದ್ದಾಯಿತು. ಉಡುಪಿಯ ಆತ್ಮೀಯ ಮಿತ್ರರಾದ ಪ್ರೊ.ಕು.ಶಿ.ಹರಿದಾಸಭಟ್ಟರು ಆಪದ್ಬಾಂಧವರಂತೆ ಸಿಕ್ಕಿದಾಗ, ವಿಶ್ವಕೋಶದ ವಿಷಯ ಚರ್ಚೆಗೆ ಬಂದು, ವಿಜ್ಞಾನವಿಭಾಗಕ್ಕೆ ಶ್ರೀ ಜಿ.ಟಿ.ನಾರಾಯಣರಾಯರನ್ನು ನೇಮಿಸಿಕೊಳ್ಳಬಹುದೆಂದು ಸಲಹೆ ಮಾಡಿದರು. ಆಗ ಬೆಂಗಳೂರು ವಿಶ್ವವಿದ್ಯಾನಿಲಯ ವ್ಯಾಪ್ತಿಯ ಸರ್ಕಾರಿ ಕಾಲೇಜಿನ ಗಣಿತವಿಜ್ಞಾನ ಇಲಾಖೆಯಲ್ಲಿದ್ದ ನಾರಾಯಣರಾಯರನ್ನು ಬಿಡಿಸಿಕೊಂಡು ಬರಬೇಕಾದರೆ ಕೆಲವು ದಿವಸ ತಪಸ್ಸುಮಾಡಬೇಕಾಯಿತು.

ಜಿಟಿಎನ್ ಬಂದ ತರುಣದಲ್ಲೇ ಮಾನವಿಕ ವಿಭಾಗದ ಸಂಪಾದಕ ಹುದ್ದೆಗೆ ಪ್ರೊ.ಕೃಷ್ಣಸ್ವಾಮಿ ಅಯ್ಯಂಗಾರ್ ಅವರನ್ನು ಒಪ್ಪಿಸಿಕೊಂಡಾಗಿತ್ತು. ಜ್ಞಾನವಿಜ್ಞಾನಗಳೇ ನಡೆದು ಬಂದಂತೆ ಈ ಯಮಳ ನಕ್ಷತ್ರಗಳು

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯನ್ನು ಪ್ರವೇಶಿಸಿದಾಗ (೧೯೬೯) ಜ್ಞಾನಜ್ಯೋತಿಯೇ ಇದ್ದಕ್ಕಿದ್ದಂತೆ ಗೋಚರಿಸಿದಂತಾಯಿತು.

ಈ ಮಹನೀಯರ ನಿರ್ವ್ಯಾಜಪ್ರೇಮ, ನಿಷ್ಕಾಮಕರ್ಮ, ಪ್ರಾಮಾಣಿಕ ಕಾರ್ಯವಿಧಾನಗಳಿಂದಾಗಿ ವಾಗ್ದಾನವನ್ನು ಸರ್ಕಾರಕ್ಕೆ ಕೊಟ್ಟ ನಿರ್ದಿಷ್ಟ ಅವಧಿಗೆ ಮುಂಚೆಯೇ ಪೂರೈಸಲಾಯಿತು.

ಈ ಯಮಳನಕ್ಷತ್ರಗಳ ಬಗ್ಗೆ ಏನಾದರೂ ಬರೆಯಬೇಕೆಂದು ಯೋಚಿಸಿದಾಗ ತಟಕ್ಕನೆ ವಿಶ್ವಕೋಶ ನೆನಪಿಗೆ ಬರುತ್ತದೆ, ಆ ನೆನಪನ್ನು ಹತ್ತಿಕ್ಕಲು ಸಾಧ್ಯವೇ ಇಲ್ಲ. ಈ ಇಬ್ಬರೂ ಯಮಳರು ಕನ್ನಡ ಸಾಹಿತ್ಯಕ್ಷೇತ್ರದಲ್ಲಿಯೂ ಹೆಸರು ಮಾಡಿದ್ದಾರೆ.

ಇದೀಗ ನಾರಾಯಣರಾಯರ 'ಅತ್ರಿಸೂನು ಉವಾಚ' ಕಣ್ಮುಂದಿದೆ. ಇದೊಂದು ಚುಟುಕು ಅಥವಾ ಮುಕ್ತಕಗಳ ಸಂಗ್ರಹ. ಸುಪ್ರಸಿದ್ಧ ಚುಟುಕು ಕವಿಗಳಾದ ಡಿವಿಜಿಯವರ ಮಂಕುತಿಮ್ಮನ ರಾಜಮಾರ್ಗದಲ್ಲಿ ನಡೆಯುತ್ತ ವೈವಿಧ್ಯಮಯವಾದ, ಬದುಕಿಗೆ ಪುಷ್ಟಿಯನ್ನು ನೀಡುವ ಅನುಭವ ವೈಭವವೇ ಚುಟುಕು ಸಾಮ್ರಾಜ್ಯದ ಮೆರೆತ, ಮೊರೆತ.

ಸಂಗೀತ ನಾರಾಯಣರಾಯರ ಉಸಿರು ನಿಜ; ವೇದನಾದಗಳಲ್ಲಿವರು ಅಭಿನ್ನತೆಯನ್ನು ಕಾಣುತ್ತಾರೆ:

ನಾದನಾವೆಯನೇರಿ ಋತಚಿದ್ರಸಾಬ್ಧಿಯಲಿ
ವೇದಪುರುಷನ ತಾಣವರಸುತ್ತ ತೇಲಿದೆನು
ಮೋದಪ್ರಮೋದಗಳ ನಾಡಿನಿಂ ಜಿಗಿದಂತೆ
ವೇದವೇ ನಾದದಲಿ ಲೀನಿಸಿತು ಅತ್ರಿಸೂನು ... ೩೧

ನಾದದ ದೋಣಿಯನ್ನೇರಿ, ಋತಚಿತ್ಸಾಗರದಲ್ಲಿರುವ ವೇದಪುರುಷನನ್ನು, ಮೋಕ್ಷವನ್ನು ಹುಡುಕುತ್ತಾರೆ. ರಾಯರ ಪಾಲಿಗೆ ನಾದವೇ ವೇದ; ನಾದದಲ್ಲಿ ವೇದ ವಿಲೀನವಾಗುತ್ತದೆ.

ಜಗತ್ತಿನಲ್ಲಿ ಸ್ವಾಮಿಗಳು, ಬೋಧಕರು ಮತ್ತು ಉಪದೇಶಿಗಳು ತತ್ತ್ವಪ್ರಚಾರಕರೇ ಹೊರತು ತತ್ತ್ವಾನ್ವೇಷಿಗಳಾಗಲಿ ತತ್ತ್ವಾಚರಣಕಾರರಾಗಲಿ ಅಲ್ಲ. ಹೇಳುವುದು ನನ್ನ ಧರ್ಮ, ಮಾಡುವುದು ನಿಮ್ಮ ಕರ್ಮ ಎಂದು ಕೇಳುಗರಿಗೆ ಆಚರಣೆಯ ಜವಾಬ್ದಾರಿಯನ್ನು ವಹಿಸುತ್ತಾರೆ:

ಕೆಲಸವನು ಮಾಡದವ ತತ್ತ್ವಗಳ ಬೋಧಿಪನು
ಕೆಲಸದಲಿ ಮಗ್ನ ತಾ ತತ್ತ್ವವನೆ ಬಾಳುವನು
ಒಲುಮೆಯಿಂದಲಿ ಕೆಲಸವೆಸಗುತಿರೆ ಮಿಂಚುವಾ
ಹೊಳಹೆ ಋಜುತತ್ತ್ವ, ಜೀವನಸಾರ ಅತ್ರಿಸೂನು ... ೧೦

ಈ ಮುಕ್ತಕ ಕಾಯಕತತ್ತ್ವಕ್ಕೆ ಸಂವಾದಿಯಾಗಿದೆ. ಕ್ರಿಯೆ ಮಾಡುವುದರಿಂದ ಹೊಸ ಹೊಸ ಜ್ಞಾನ ಉದ್ಭವವಾಗುತ್ತದೆನ್ನುವಾಗ ಶಿವಶರಣರ ಜ್ಞಾನಕ್ರಿಯೆಗಳ ಅವಲಂಬನತತ್ತ್ವ ನೆನಪಿಗೆ ಬರುತ್ತದೆ. ಸದಾ ಕ್ರಿಯಾಶೀಲನಾಗಿದ್ದರೆ ಮಾತ್ರ ಜ್ಞಾನಮೇರುವನ್ನೇರಲು ಸಾಧ್ಯವಾಗುತ್ತದೆ.

ಎಡೆಬಿಡದೆ ನಡೆವಾತ ತಲಪದಿಹ ನೆಲೆಯಿಲ್ಲ
ಎಡಹಿದರೆ ಕಾರಣವ ಶೋಧಿಪನು, ನವಪಥವ
ಸಡಗರದಿ ಕಾಣುವನು, ಜ್ಞಾನಮೇರುವನೇರು-
ವೊಡೆ ನಿತ್ಯ ಯಾತ್ರಾರ್ಥಿಯಾಗಿರೋ ಅತ್ರಿಸೂನು ... ೨೦

ಜೀವನದ ಯಶಸ್ಸು ಜ್ಞಾನವನ್ನವಲಂಬಿಸಿದೆ; ಜ್ಞಾನಾರ್ಜನೆ ನಿರಂತರ ಪರಿಶ್ರಮದಿಂದ ಮಾತ್ರ ಸಾಧ್ಯವೆಂಬುದು ಶಾಶ್ವತ ಸತ್ಯ.

ಸಮರಸದ ಜೀವನಕ್ಕೆ ಬುದ್ಧಿ ಹೃದಯಗಳ ಸಂಲಗ್ನ ಅನಿವಾರ್ಯ. ಬುದ್ಧನಲ್ಲಿ ಈ ಸಂಲಗ್ನವಿದ್ದದ್ದರಿಂದಲೇ ಅವನು ಅಸಾಧಾರಣ ಪುರುಷನಾಗುತ್ತಾನೆ.

ಬುದ್ಧನೆಂಬವನೇನು ಸಾಮಾನ್ಯ ಪುರುಷನೇ?
ಬುದ್ಧಿಸಂಸ್ಕಾರಕ್ಕೆ ಹೃದಯ ಸಂವೇದನೆಯು
ಬದ್ಧಗೊಂಡಾಗ ಮೈದಳೆದ ಆದರ್ಶ ಪರಿ–
ಶುದ್ಧಾತ್ಮನವ ಮನುಜಕುಲತಿಲಕ ಅತ್ರಿಸೂನು ... ೨೭

ಬುದ್ಧಿ ಭಾವವನ್ನು ನಿಯಂತ್ರಿಸಬೇಕು; ಭಾವ ಬುದ್ಧಿಯ ವಿಕಾಸಕ್ಕೆ ಸ್ಫೂರ್ತಿಯಾಗಬೇಕು. ಹೃದಯ ಸಂವೇದನೆಯೇ ಧರ್ಮ–ನೀತಿಗಳ ಮೂಲ ಪ್ರೇರಕಶಕ್ತಿಯೆಂದರೂ ತಪ್ಪಾಗದು.

ಸಂಪ್ರದಾಯಬದ್ಧನಾದ ಸಾಹಿತಿ ಪ್ರಗತಿಪರ ಉತ್ತಮ ಕೃತಿಯನ್ನು ರಚಿಸುವುದು ಕಷ್ಟ. ಶ್ರೇಷ್ಠಕವಿ ಯುಗಧರ್ಮ ರೂಪಿಸುವುದಲ್ಲದೆ, ಅದನ್ನು ತನ್ನ ಕೃತಿಗಳಲ್ಲಿ ಬಿಂಬಿಸುತ್ತಾನೆ. ಯುಗಧರ್ಮವನ್ನು ರೂಪಿಸುವಲ್ಲಿ ಸಂತ, ಋಷಿ, ವಿಜ್ಞಾನಿ, ಕಲಾವಿದ, ಕೊನೆಗೆ ಶ್ರೀಸಾಮಾನ್ಯರು ಸಹ ಪಾತ್ರಧಾರಿಗಳೆಂಬುದನ್ನು ಮರೆಯಲಾಗದು. ನಿಸರ್ಗ–ಪರಿಸರ ಸಹ ಸದಾ ಪರಿವರ್ತನೆಯ ಮಾರ್ಗದಲ್ಲಿರುತ್ತದೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಬದ್ಧವಾಙ್ಮಯವ ಹೊಸವಾತ ಕಾಲಾಂತರದಿ
ಮೊದ್ದನಾಗುವುದು ದಿಟ, ಅನುಭವದ ಭಾಂಡದಲಿ
ಕುದ್ದಾಗ ಸ್ವಪ್ರತಿಭೆ ಸೃಜನಶೀಲತೆ ಹೊಮ್ಮಿ
ಶುದ್ಧ ಸಾಹಿತ್ಯವರಳುವುದು ಕಾಣ್ ಅತ್ರಿಸೂನು ... ೪೦

ಅನುಭವವೇ ಕಾವ್ಯಜೀವಾಳವೆಂಬುದು ಈ ಮುಕ್ತಕದ ಮಥಿತಾರ್ಥ.

ಮುಂದಿನ ಚುಟುಕು ಕವಿಯ ರೂಪಕಧ್ವನಿ ಕಲ್ಪನೆಗೆ, ದಾರ್ಶನಿಕ ದೃಷ್ಟಿಗೆ ಉತ್ತಮ ನಿದರ್ಶನವಾಗಿದೆ.

ಶಿಲೆಕವಿದು ಗೊಮ್ಮಟನ ಮುಚ್ಚಿಹುದೊ? ಗೊಮ್ಮಟನೆ
ಛಲದಿಂದೆ ತಪಗೈಯೆ ಕಲ್ಕವಚವಂ ತೊಟ್ಟು

ಕುಳಿತಿಹನೊ? ದೃಷ್ಟಾರ ಸ್ಪರ್ಶದಲಿ ಶಿಲೆಕರಗಿ
ಕಲೆ ಬೆಳಗಿ ನಳನಳಿಪುದಿದು ಸೃಷ್ಟಿ ಅತ್ರಿಸೂನು ... ೧೮

ದೃಷ್ಟಾರನ ದೃಷ್ಟಿಯಲ್ಲಿ ಶಿಲೆ ಮರೆಯಾಗಿ ಕಲೆ ಮಾತ್ರವೇ ಎದ್ದುಕಾಣುತ್ತದೆ.

ನಾರಾಯಣರಾಯರು ಕಟ್ಟಾ ವಿಜ್ಞಾನಿ, ವಿಚಾರವಾದಿ. ಮೌಢ್ಯ ಸಂಪ್ರದಾಯಗಳನ್ನು ಆಮೂಲಾಗ್ರವಾಗಿ ತಿರಸ್ಕರಿಸುವ ಅವರು ಸಂಪ್ರದಾಯವಾದಿಗಳ ಕಟುಟೀಕೆಗೆ ಗುರಿಯಾಗಿದ್ದಾರೆ. ರಾಯರು ಸತ್ಯಕ್ಕೆ ಶರಣಾಗುತ್ತಾರಲ್ಲದೆ ಮಿಥ್ಯೆಗಲ್ಲ. ರಾಹುಕೇತು ಮತ್ತು ಗ್ರಹಣಗಳನ್ನು ಯಾರು ನಂಬುತ್ತಾರೆಯೊ ಅವರನ್ನು ಸಹಜಮತಿಶೂನ್ಯಗಾವಿಲರೆಂದು ತೆಗಳುತ್ತಾರೆ.

ರಾಹು ಕೇತುಗಳೆಂಬ ರಕ್ಕಸರು ನುಂಗುವರು
ಗ್ರಹಣ ಕಾಲದಿ ಸೂರ್ಯ ಚಂದ್ರರನ್ನೆನುತ ಬಲು
ತಹತಹಿಸಿ ವ್ರತ ನಿಯಮ ಬಲಿ ಹೋಮವೆಸಗುವವ
ಸಹಜಮತಿಶೂನ್ಯ ಗಾವಿಲ ಕಣಾ ಅತ್ರಿಸೂನು ... ೨೨

ಅವರು ಜಾತಕವನ್ನು ನಂಬುವುದಿಲ್ಲ. 'ಜಾತಕಕೆ ಶರಣಾಗಿ ಹತವೀರ್ಯನಾಗದಿರು' ಎನ್ನುವ ಅವರ ಮಾತನ್ನು ಭಾರತೀಯರು ನಂಬಬೇಕು. ಗ್ರಹಗತಿಗೆ ಕಾಯುವವರು ಸೋಲು ಅನುಭವಿಸ ಬೇಕಾಗುತ್ತದೆಂದವರು ಕರಾರುವಾಕ್ಕಾಗಿ ನುಡಿಯುತ್ತಾರೆ.

ಮಹದಾಶಯವ ತಳೆದು ಕನಸು ಕಾಣುತ ಕುಳಿತು
ಗ್ರಹಗತಿಯ ಕಾದವನು ಸೋಲುವನು, ಕೆಲಸ ನಿ-
ರ್ವಹಿಸಲೆನ್ನುತ ಮುಂದೆ ನಡೆದವನು ಗೆಲ್ಲುವನು
ರಹದಾರಿ ಕಾಯಕವೆ ವಿಜಯಕ್ಕೆ ಅತ್ರಿಸೂನು ... ೭೫

ಗ್ರಹಗತಿಯಲ್ಲ, ಕಾಯಕವೆ ಮಾನವನಿಗೆ ಮುಕ್ತಿಯೆಂಬುದು

ಶಿವಶರಣರ ಆದರ್ಶವಾಗುತ್ತದೆಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಯಾವಾಗಲೂ ಎಲ್ಲ ದೇಶಗಳಲ್ಲಿಯೂ ಸಿರಿವಂತರದೇ ಮೆರವಣಿಗೆ; ಅವರದೇ ದರ್ಬಾರಿನಲ್ಲಿ ಅವರು ಸಿರಿವಂತರಾದದ್ದು ಬಡವರ ಬೆವರಿನಿಂದ, ಅವರ ತ್ಯಾಗದಿಂದ ಎಂಬುದನ್ನು ಸಿರಿವಂತರು ನೆನೆಯುವುದಿಲ್ಲ. ಅವರನ್ನು ಪರಪುಷ್ಟರೆಂದು ಕರೆದಿರುವುದು ಸರಿಯೇ ಸರಿ.

ಅರವಟ್ಟಿಗೆಯಿದೆ ಮಜ್ಜಿಗೆಯಿಲ್ಲ, ಮೌಲ್ಯಗಳು
ಮರಣಿಸಿವೆ; ಪರಪುಟ್ಟ ಸಿರಿವಂತ ಮಂದಿಯದೆ
ಮೆರವಣಿಗೆ – ನೆಲತಾಯಿ ಬೋಳು, ಬಡವರ ಗೋಳು
ಕುರುಡ ಕಿವುಡರರಿವಿಗೆ ಬರುವುದೇ? ಅತ್ರಿಸೂನು ... ೧೯

ಜಗತ್ತಿನಲ್ಲಿರುವುದು ಎರಡೇ ಗುಂಪುಗಳು: ಒಂದು ಸಿರಿವಂತರದು; ಎರಡು ಕುರುಡ ಕಿವುಡರದು. ಸಿರಿವಂತರ ಕೊಳ್ಳೆ ಆಡಂಬರ ಯಾರಿಗೂ ಕಾಣಿಸದು; ಬಡವರ ಗೋಳು ಯಾರಿಗೂ ಕೇಳಿಸದು. 'ಹಾವು ತಿಂದವರ ನುಡಿಸಬಹುದು; ಗರ ಹೊಡೆದವರ ನುಡಿಸಬಹುದು; ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ!' ಎಂದು ಬಸವೇಶ್ವರರು ಶ್ರೀಮಂತರ ಅಹಂಕಾರವನ್ನು ಖಂಡಿಸುತ್ತಾರೆ. ಸೂಜಿಯ ಕಣ್ಣಿನಲ್ಲಿ ಒಂಟೆ ನುಸುಳಬಹುದಾದರೂ ಶ್ರೀಮಂತರಿಗೆ ಸ್ವರ್ಗದಲ್ಲಿ ಪ್ರವೇಶವಿಲ್ಲವೆಂದು ಕ್ರಿಸ್ತ ಸಹ ಸ್ಪಷ್ಟಪಡಿಸುತ್ತಾನೆ.

ನಾರಾಯಣರಾಯರ ಸಮೃದ್ಧ ಲೋಕಾನುಭವಕ್ಕೆ ಮತ್ತು ಅವರ ಸೂತ್ರಪ್ರಾಯದ ಭಾಷಾಪ್ರೌಢಿಮೆಗೆ ನಾಲ್ಕಾರು ನಿದರ್ಶನಗಳನ್ನಿಲ್ಲಿ ಉದ್ಧರಿಸಬಹುದಾಗಿದೆ.

ಕೊಟ್ಟದ್ದು ಬೆಳೆಯುವುದು, ಇಟ್ಟದ್ದು ಕೊಳೆಯುವುದು... ೪೨

ಪ್ರೀತಿ-ನೀತಿಗಳೆರಡು ಸಂಗಳಿಸೆ ಬಾಳಿನಲಿ
ಮಾತು-ಕೃತಿಗಳಭಿನ್ನವೆನಿಸುವುವು ಅತ್ರಿಸೂನು ... ೬೬

ಹಳೆಯದನು ತೊರೆದು ಹೊಸ ಬೆಳಕನರಸುವವ ಋಷಿ ... ೬೭

ಸುಂದರತೆಯೇ ನಿಸರ್ಗದ ಭಾಷೆ ... ೯೪

ನಶ್ವರದ ಹೃದಯಾಂತರಾಳದಲಿ ಹುದುಗಿರುವ
ಶಾಶ್ವತವನಾವಿಷ್ಕರಿಸುವಾತ ಯುಗಪುರುಷ ... ೧೧೨

ಸತ್ಯಸಾಧನೆಗಿಲ್ಲವೆಲ್ಲಿಯೂ ಒಳದಾರಿ ... ೧೧೩

ಕಾವ್ಯ ಬದುಕಿಗೆ ಬರೆದ ಭಾಷ್ಯ ... ೧೨೩

ಕೊಚ್ಚೆಯಲಿ ಮಚ್ಚರಿಪ ಹಂದಿಗಳ ಹಿಂಡುಂಟು ... ೧೨೫

ಇಂಥ ಇನ್ನೂ ಹಲವಾರು ಉದಾಹರಣೆಗಳು ಈ ಮುಕ್ತಕಗಳೊಳಗೆ ಹರಡಿಕೊಂಡಿವೆ. ಇಡೀ ಮುಕ್ತಕವೆ ಸೂತ್ರವಾಗಿ ಗೋಚರಿಸಬಹುದು. ಇದೀಗ ಚುಟುಕು ಅಥವಾ ಮುಕ್ತಕ ಅರ್ಥಪೂರ್ಣವೂ ಪರಿಣಾಮಕಾರಿಯೂ ಜನಪ್ರಿಯವೂ ಆದ ಕಾವ್ಯಪ್ರಕಾರವಾಗಿ ವಿರಾಜಿಸುತ್ತಿದೆ.

ಮುಕ್ತಕದ ವಿಸ್ತಾರಕುಂಟೆ ಮಿತಿ? ಅವನವನ
ಶಕ್ತಿಗೊಪ್ಪುವ ತೆರದೊಳನುಭವಾಮೃತವ ಚಾ-
ಟೂಕ್ತಿಯಲಿ ಬಿತ್ತರಿಪ ಕಾವ್ಯಪ್ರಕಾರವದು
ಮುಕ್ತಿಪಡೆಯಲು ನಂಬು ಮುಕ್ತಕವ ಅತ್ರಿಸೂನು ... ೧೧೬

ಚುಟುಕೆಂದರೇನು? ಅದು ವಿಸ್ತಾರ ಕಾವ್ಯದಾ
ಗುಟುಕು, ಜೀವನ ರಹಸ್ಯಗಳ ಸಂಕ್ಷಿಪ್ತ
ಚಿಟಿಕೆ ಕಾಣ್, ಪರಮಾಣು-ವಿಶ್ವಸಂಬಂಧವದು
ಕಿಟಕಿ ತೆರೆ ತಿಳಿಯುವೆಯದರ ಹರವು ಅತ್ರಿಸೂನು ... ೧೨೮

ಗುಟುಕು ಮತ್ತು ಚಿಟಿಕೆಗಳ ಅರ್ಥವನ್ನು ಗ್ರಹಿಸಿದ್ದಾದರೆ ಚುಟುಕುಗಳ ಹಿರಿಮೆ ಮನದಟ್ಟಾಗುತ್ತದೆ. 'ಪರಮಾಣು-ವಿಶ್ವಸಂಬಂಧವದು' ಎಂಬ ಮಾತೂ ಚುಟುಕಿನ ರಹಸ್ಯವನ್ನು ಬೆಳಕಿಸಿ ತೋರಿಸುತ್ತದೆ.

ಅತ್ರಿಸೂನು ಅವರು ಮಹಾಮನೀಷಿ, ಸ್ನೇಹಮಯಿ, ಉದಾರಹೃದಯಿ, ಕನ್ನಡಪ್ರೇಮಿ, ಶಿಸ್ತಿನ ಸಿಪಾಯಿ.

ಅಧ್ಯಾಪಕವೃತ್ತಿಯಲ್ಲಿದ್ದಾಗ ಎನ್‌ಸಿಸಿ ಅಧಿಕಾರಿಯೂ ಆಗಿದ್ದರು. ಅವರು ವ್ಯವಹರಿಸುವ ಪ್ರತಿಯೊಂದು ಕ್ಷೇತ್ರದಲ್ಲಿಯೂ ಕಠೋರ ಶಿಸ್ತನ್ನು ಪಾಲಿಸುತ್ತಾರೆ. ಯಾವುದಾದರೂ ಕೆಲಸವನ್ನು ಕೈಗೆತ್ತಿಕೊಂಡರೆ, ಅದನ್ನು ಕೊನೆಯತನಕ ಸಾಧಿಸುವ ಸಾತ್ತ್ವಿಕ ಛಲ ಅವರದು. ಅವರು ಯಾವಾಗಲೂ ಆಶಾವಾದಿ. ಅವರ ವಿಶಿಷ್ಟ ವ್ಯಕ್ತಿತ್ವದ ಛಾಪನ್ನು ಅವರ ಬರಹಗಳಲ್ಲಿಯೂ ಕಾಣಬಹುದು.

ನಾರಾಯಣರಾಯರು ಕುವೆಂಪು ಸಾಹಿತ್ಯವನ್ನು, ಮುಖ್ಯವಾಗಿ 'ಶ್ರೀರಾಮಾಯಣದರ್ಶನಂ ಮಹಾಕಾವ್ಯ'ವನ್ನು ಚೂಲಮೂಲವಾಗಿ ಅಧ್ಯಯನಮಾಡಿದವರು. ಅವುಗಳಲ್ಲಿ ಬರುವ ವೈಜ್ಞಾನಿಕ ಪ್ರಕರಣಗಳಿಗೆ ಇವರು ಪೂರ್ಣಪ್ರಮಾಣದ ನಿಖರ ಭಾಷ್ಯಗಳನ್ನು ರಚಿಸಿದ್ದಾರೆ. ಮಾತ್ರವಲ್ಲ, ಅವರ ವಿಜ್ಞಾನ ಗ್ರಂಥಗಳನ್ನು ಕುವೆಂಪು ಅವರೂ ಅವರ ಮಕ್ಕಳೂ ಓದಿ ಮೆಚ್ಚಿಕೊಂಡಿದ್ದಾರೆ. ಅವರ ಅಸಾಧಾರಣ ವಿದ್ವತ್ತಿಗೆ ವಿಶ್ವಕೋಶ ಹಾಗೂ ಅವರ ಗ್ರಂಥಗಳೇ ಚಿರಂತನ ಸಾಕ್ಷಿಗಳಾಗಿ ಉಳಿಯುತ್ತವೆ. ರಾಯರ ವಿದ್ವತ್ತು ಸದಾ ಕನ್ನಡದ ಎಲ್ಲ ಮನೆ ಮನಗಳನ್ನೂ ಮುಟ್ಟಲೆಂದು ಹಾರೈಸುತ್ತೇನೆ.

ಚುಟುಕು ಸಾಹಿತ್ಯಕ್ಕೊಂದು ಸಿಂಹಾಸನವನ್ನು ನಿರ್ಮಿಸಿ, ಅದನ್ನು ಕರ್ನಾಟಕದ ಉದ್ದಗಲಗಳಲ್ಲಿ ಮೆರೆಸಿ, ಮನೆ ಮನಗಳಿಗೆ ಮುಟ್ಟಿಸಿದ ಚಲ ಹಾಗೂ ಕೀರ್ತಿ ಎಂದೂ ಸೋಲರಿಯದ ಡಾ.ಎಂ.ಜಿ.ಆರ್. ಅರಸು ಅವರಿಗೆ ಸಲ್ಲಬೇಕು. ಅವರಿಗೆ ಮಾತ್ರವಲ್ಲ ಅವರ ಕುಟುಂಬಕ್ಕೂ ಸಲ್ಲಬೇಕು. ಅವರು ತಮ್ಮ ವೈದ್ಯವಾರ್ತಾಪ್ರಕಾಶನದ ಮುಖಾಂತರ ಈ ಕೃತಿಯನ್ನು ಪ್ರಕಟಿಸುತ್ತಿರುವುದು ಸಂತೋಷದ ಸಂಗತಿ. ಅವರಿಗೆ ನನ್ನ ಧನ್ಯವಾದಗಳು.

ಮೈಸೂರು–೧೨ — ದೇಜಗೌ

೧೮–೨–೦೮

# ಅರಿಕೆ

ಕಲಾವಿದ, ಸಾಹಿತಿ, ವಿಜ್ಞಾನಿ ಮೊದಲಾದ ಪ್ರತಿಯೊಬ್ಬ ಜ್ಞಾನಾನ್ವೇಷಕನಿಗೂ ತುರೀಯ ಸ್ಥಿತಿಯಲ್ಲಿ ಕೆಲವೊಂದು ಆಧ್ಯಾತ್ಮಿಕ ಹೊಳಹುಗಳು ಮಿನುಗುವುದು ವಿರಳವಲ್ಲ: ತಾನು ಒಂದೇ ಸತ್ತ್ವದ ವಿವಿಧ ಮುಖಗಳನ್ನು ಕಾಣುತ್ತಿರುವೆನೇ, ಅದರ ವಿವಿಧ ಸ್ವರೂಪಗಳನ್ನು ತನ್ನ ಮಾಧ್ಯಮದ ಮೂಲಕ ಬಿಂಬಿಸುತ್ತಿರುವೆನೇ, ಅಂತಿಮವಾಗಿ ವಾಸ್ತವತೆಯೂ ಸತ್ಯವೂ ಒಂದೇ ಆಗಿರಬಹುದೇ, ಇತ್ಯಾದಿ. ಇಂಥಲ್ಲಿ ಆತನ ಸೃಜನಶೀಲತೆ ಪ್ರಜ್ವಲಿಸಿ ಆತ ಕಾವ್ಯಭಾಷೆಗೆ ಶರಣಾಗುವುದು ವಾಡಿಕೆ.

ಎಂದೇ ವಿಜ್ಞಾನದ ಮೂರ್ತವಿಶ್ವ ಅಥವಾ ಕಲೆಯ ಅಮೂರ್ತಲೋಕ ಇವುಗಳ ಅನುಶೀಲನೆಯಲ್ಲಿ ಮಗ್ನರಾಗಿರುವ ಜ್ಞಾನಪಿಪಾಸುಗಳ ಕೃತಿಗಳನ್ನು ಓದುವಾಗ ನಮ್ಮಲ್ಲಿಯೂ ಸದೃಶ ಚಿಂತನೆಗಳು "ಭೃಂಗದ ಬೆನ್ನೇರಿ ಬಂದು......ಮಿಂಚಿ ಮಾಯವಾಗುವುದು" (ಬೇಂದ್ರೆ) ಎಲ್ಲರ ಅನುಭವ. ಅಡಿಗರ ಅರ್ಥಪೂರ್ಣ ಉದ್ಗಾರ ಗಮನಿಸಬೇಕು: "ಅದೃಶ್ಯ ಲೋಕದ ಅನೂಹ್ಯ ರೂಪದ ಅನಂತ ಕಾಲದ ಯಾತ್ರಿಕರೇ! ಮಣ್ಣಿನ ಮನದಲಿ ಹೊನ್ನನೆ ಬೆಳೆಯುವ ಅಪೂರ್ವ ತೇಜದ ಮಾಂತ್ರಿಕರೇ!"

ಆಧುನಿಕ ವಿಜ್ಞಾನದ ಗಹನ ಪರಿಕಲ್ಪನೆಗಳನ್ನು ಕನ್ನಡದಲ್ಲಿ ವಿವರಿಸುತ್ತಿರುವಾಗ ಇಂಥ ಅನೇಕ ಹೊನ್ನುಗಳು ನನ್ನೊಳಗೂ ಮಿಂಚಿ ಮಾಯವಾಗಿವೆ. ನಮ್ಮ ಸಂಸ್ಕೃತಿ – ಮುಖ್ಯವಾಗಿ ಭಗವದ್ಗೀತೆ, ಸರ್ವಜ್ಞನ ತ್ರಿಪದಿಗಳು, ಸೋಮೇಶ್ವರ ಶತಕ ಮುಂತಾದವು – ಇವುಗಳಿಗೆ ಪೋಷಕ ಧಾತುಗಳನ್ನು ಸಮೃದ್ಧವಾಗಿ ಊಡಿ ಇಲ್ಲಿಯ ಅನೇಕ ಉವಾಚಗಳ ಉಗಮಕ್ಕೆ ಕಾರಣವಾಗಿದೆ.

ಇವು ಕೇವಲ ಆತ್ಮ ಸಂತೋಷಾರ್ಥ ಬರೆದಂಥವು. ಇವುಗಳಿಗೆ ಮುಖ್ಯ ಸ್ಫೂರ್ತಿ ಡಿವಿಜಿ, ಕುವೆಂಪು ಮತ್ತು ಇವರ ಸಮಭುಜ ಮಹಾಕವಿಗಳ

ವಿಪುಲ ವಾಙ್ಮಯ. ಕನ್ನಡದ ಭಗವದ್ಗೀತೆಯೆಂದೇ ಪ್ರಸಿದ್ಧವಾಗಿರುವ "ಮಂಕುತಿಮ್ಮನ ಕಗ್ಗ"ದಿಂದ ವಿಶೇಷವಾಗಿ ಪ್ರಭಾವಿತನಾದ ನಾನು ಅದೇ ಧಾಟಿಯಲ್ಲಿ "ಅತ್ರಿಸೂನು ಉವಾಚ"ದ ಚೌಪದಿಗಳನ್ನು ಬರೆಯಲು ತೊಡಗಿದೆ (೧೯೮೦ರ ದಶಕದಿಂದೀಚೆಗೆ).

ಕೇವಲ ಖಾಸಗಿ ಚಲಾವಣೆಯಲ್ಲಿದ್ದ ಈ ತುಣುಕುಗಳನ್ನು ಕುತೂಹಲದಿಂದ ಮತ್ತು ನನ್ನ ಬಗೆಗಿನ ವಿಶೇಷ ಪ್ರೀತಿಯಿಂದ ಗಮನಿಸಿ ೧೨೮ ಚೌಪದಿಗಳ ಕಿರುಹೊತ್ತಗೆ ಪ್ರಕಟಿಸಲು ಮುಂಬಂದವರು ಕರ್ನಾಟಕ ಚುಟುಕು ಪರಿಷತ್ತಿನ ಚೇತನವಾಗಿರುವ ಡಾ.ಎಂ.ಜಿ.ಆರ್.ಅರಸುಅವರು. ತಮ್ಮ ಮಾನಸ ಶಿಶು ವೈದ್ಯವಾರ್ತಾ ಪ್ರಕಾಶನದ ಮೂಲಕ "ಅತ್ರಿಸೂನು ಉವಾಚ"ಬೆಳಕು ಕಾಣುತ್ತಿದೆ. ಡಾ.ಅರಸುಅವರಿಗೂ ಅವರ ಅನುಯಾಯಿಗಳಿಗೂ ಚಿರಋಣಿಯಾಗಿದ್ದೇನೆ.

ತಮ್ಮ ಮೊದಲ ಮಾತಿನ ಆಶೀರ್ವಾದದಿಂದ ಈ ಕಿರಿ ಪುಸ್ತಿಕೆಗೆ ಹಿರಿ ಅಂತಸ್ತನ್ನು ಆವಾಹಿಸಿರುವ ನಾಡೋಜ ದೇಜಗೌ ಅವರಿಗೆ ಸಾಷ್ಟಾಂಗ ಪ್ರಣಾಮಗಳು.

೩೦-೧-೨೦೦೮ ಜಿ.ಟಿ.ನಾರಾಯಣರಾವ್

೮ ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತೀಪುರ, ಮೈಸೂರು ೫೭೦೦೦೯
ದೂರವಾಣಿ ೦೮೨೧-೨೫೪೩೦೫೯



**ಚುಟುಕು ಸಾಹಿತ್ಯ.........**

**ಬದುಕಿಗೆ ಲಾಲಿತ್ಯ .........**

# ಅರ್ಪಣೆ

ಮೈಸೂರಿನ ಸುಪ್ತ ಅಂತರ್ವಾಣಿಗೆ ಖಚಿತ ಲಿಖಿತ ರೂಪವನ್ನು ಪ್ರತಿ ಮುಂಜಾನೆ ಕನ್ನಡದಲ್ಲಿಯೂ ಸಂಜೆ ಇಂಗ್ಲಿಷಿನಲ್ಲಿಯೂ ನೀಡುತ್ತ, ನನ್ನನ್ನೂ ಒಳಗೊಂಡಂತೆ ಅಸಂಖ್ಯ ಲೇಖಕರಿಗೆ ಯುಕ್ತ ಅಭಿವ್ಯಕ್ತಿ ವೇದಿಕೆಯನ್ನು ಒದಗಿಸುತ್ತ ಬರುತ್ತಿರುವ ಮುಂಜಾನೆ ನೇಸರು 'ಮೈಸೂರು ಮಿತ್ರ' ('ಮಿತ್ರ' ಎಂದರೆ 'ಸೂರ್ಯ' ಎಂಬ ಅರ್ಥವೂ ಉಂಟು) ಮತ್ತು ಸಂಜೆ ಬೆಳಕು *Star of Mysore* ದೈನಿಕಗಳ ಸ್ಥಾಪಕ ಸಂಪಾದಕರಾಗಿರುವ ಜೀವನ ಪ್ರೇಮಿ

ಚಿರಂಜೀವಿ ಕೆ.ಬಿ. ಗಣಪತಿಯವರಿಗೆ



*ಅಭಿಮಾನಪೂರ್ವಕವಾಗಿ*

*ಜಿ.ಟಿ. ನಾರಾಯಣರಾವ್*

# ಅತ್ರಿಸೂನು ಉವಾಚ

ಅತ್ರಿಸೂನೆಂಬಾತ ಮಂಕುತಿಮ್ಮನಿಗೇನು
ಪುತ್ರನೇ? ಭ್ರಾತೃವೇ? ಕುಲಜನೇ? ನಕಲಿಯೇ?
ಚಿತ್ರಭಾನುವು ತಿಮ್ಮ, ಬರಿ ಕಿರಿ ಸೋದರು ಸೂನು,
ಶತ್ರುಗಳುಭಯರುಂ ತಮಂಧಕ್ಕೆ ಅತ್ರಿಸೂನು ... ೧

ವೆಂಕ-ತಿಮ್ಮರ ಪುತ್ರ, ಮರುಳ ಮುನಿಯನ ಮಿತ್ರ,
ಪಂಕದಲಿ ಕಮಲವರಳುವ ಸೂತ್ರವನ್ನರಿತು
ಸಂಕಟವನೆದುರಿಸುತ ಕುಂಚಿಸಿದನೀ ಚಿತ್ರ –
ಮಂಕುತಿಮ್ಮನ ರಾಜಮಾರ್ಗದಲಿ ಅತ್ರಿಸೂನು ... ೨

ಸರ್ವಜ್ಞ ಕವಿಯತ್ತ ದೃಷ್ಟಿಯಂ ನಾಭಿಸುತ
ಗರ್ವಮಂ ತರಿದೊಗೆದು ವಿನಯದಿಂ ಬಾಳುತ್ತ
ಉರ್ವಿಯೊಳಗೊಳ್ಳೆಯದನೇ ನೋಡೆ
ಸರ್ವಪ್ರಯತ್ನವಂ ಮಾಡುತಿಹ ಅತ್ರಿಸೂನು ... ೩

ಶ್ರೀಕುವೆಂಪುಗೆ ನಮಿಸಿ, ದೇಜಗೌ ಕೃಪೆ ನೆನೆದು,
ನಾಕಭಾಷೆಯೆನಿಪ್ಪ ಸಿರಿಗನ್ನಡದಲಿ ಬರೆದ-
ನೀ ಕಗ್ಗ – ಜೀವನ ಕ್ವಥನದಲಿ ಮೌಲ್ಯಗಳು
ಸಾಕಾರಗೊಂಡುದಕೆ ನುಡಿಯೊಡಲು ಅತ್ರಿಸೂನು ... ೪

ಸಂಗೀತವಿವನುಸಿರು, ಸಾಹಿತ್ಯವಿವನೊಡಲು,
ವಿಜ್ಞಾನವಿವನಶನ, ಅಧ್ಯಾತ್ಮದೆಡೆಗಮನ,
ನಿರಪೇಕ್ಷ ನಿಸ್ವಾರ್ಥ ನಿರ್ಮೋಹ ಸೇವೆ ಗುರಿ,
ಅಜ್ಞಾನತಮನಿವಾರಣೆ ಧ್ಯೇಯ ಅತ್ರಿಸೂನು ... ೫

ಸ್ನೇಹವೆಂಬುವುದೇನು? ಕೃತಕಪ್ರದರ್ಶನವೆ?
ಸಾಹಸ ದ್ಯೋತಕವೆ? ಬರಿದೆ ಬೂಟಾಟಿಕೆಯೆ?
ಸಾಹಚರ್ಯದ ಸೇತು, ಮಧುರ ಭಾವನೆಗಳಿಗೆ
ವಾಹನವದೇ ಬದುಕು, ಉಲ್ಲಾಸ ಅತ್ರಿಸೂನು ... ೬

ವಿಶ್ವಾಸ? ಜೀವನೋಚ್ಛ್ರಾಯಕರ ಉಚ್ಛ್ವಾಸ,
ನಿಃಶ್ವಾಸ? ಸಂತೋಷ ಗಳಿಸೆ ತೆರಬೇಕಾದ
ಧ್ಯಾಸ, ನಿನ್ನೊಳಗಿರ್ಪ ಕೆಚ್ಚು. ಉಚ್ಛ್ವಾಸ-ನಿಃ-
ಶ್ವಾಸಗಳ ಸಂತುಲನೆಯೇ ಬದುಕು ಅತ್ರಿಸೂನು ... ೭

ಶ್ರುತಿ? ಗಾನಚಾಲಕನ ರಾಜಪಥ. ಪರಿಶುದ್ಧ
ಮತಿ? ಚಾಲನೆಯನು ಪ್ರೇರಿಪ ಶಕ್ತಿ, ಜೀವಾಳ.
ಗತಿ? ಮಾತುಧಾತುಗಳ ಬೆಸೆವ ಸುಂದರ ಪಾಕ.
ಕೃತಿ? ಇದೇ ಸಂಗೀತದೊಡಲು ಕಾಣ್ ಅತ್ರಿಸೂನು ... ೮

ಗ್ರಹಗತಿಯ ತಿದ್ದುವನು ವೀರಪುರುಷೋತ್ತಮನು
ಗ್ರಹಗತಿಗೆ ಶರಣಾಗಿ ಮಸಳುವನು ಹೆಂಬೇಡಿ
ಸಹನೆ ನೀತಿಯ ಮೇಲೆ ನಿಂತಿರಲು ಜೀವನವು
ಸಹ್ಯವಾಗುವುದು ದಿಟ ನಡೆಮುಂದೆ ಅತ್ರಿಸೂನು ... ೯

ಕೆಲಸವನು ಮಾಡದವ ತತ್ತ್ವಗಳ ಬೋಧಿಪನು
ಕೆಲಸದಲಿ ಮಗ್ನ ತಾ ತತ್ತ್ವವನೆ ಬಾಳುವನು
ಒಲುಮೆಯಿಂದಲಿ ಕೆಲಸವೆಸಗುತಿರೆ ಮಿಂಚುವಾ
ಹೊಳಹೆ ಋಜುತತ್ತ್ವ, ಜೀವನಸಾರ ಅತ್ರಿಸೂನು ... ೧೦

ಹಣವಿತ್ತು ಗಳಿಸುವೆಯ ಮಗುವಿನಾ ಮುಗ್ಧ ನಗು?
ಧನತೆತ್ತು ಕೊಳ್ಳುವೆಯ ಇನಿಯಳೆದೆಯೊಲುಮೆಯನು?
ಮಣಿಯಿತ್ತೆ ಶಿವಚಾಪ ರಾಮನ ವಿನಯಕೆ ರಾ-
ವಣನಹಂಕಾರವಪ್ಪಿತು ಸೋಲು ಅತ್ರಿಸೂನು ... ೧೧

ಕಿರಿದರೊಳು ಪಿರಿದರ್ಥ ತುಂಬುವರು ಶೈಲಿ ಹದ-
ವರಿತಲಂಕಾರಗಳ ನೇಯುವರು, ವಾಚ್ಯಾರ್ಥ
ನಿರತನಾಗಿರ್ಪಂತೆ ಕಲ್ಪನೆಯು ಜಿಗಿವುದೈ
ಅರಿಲುಗಳ ನಾಡಿಗಿದು ಬಲು ಚೋದ್ಯ ಅತ್ರಿಸೂನು ... ೧೨

ತೋರಣಕೆ ಮರುಳಾಗಿ ಬಟ್ಟೆಯನು ಹೊಸೆವಾತ
ಹೂರಣವ ಪಡೆಯದೇ ಹೆಡ್ಡನಾಗುವ ನೋಡು
ಹೂರಣವನರಸುತ್ತ ಸಾಗುವವ ಪರಿಶುಭ್ರ
ತೋರಣವನುಂ ಗಳಿಸಿ ಸುಖಿಸುವಂ ಅತ್ರಿಸೂನು ... ೧೩

ಶ್ರುತಿಲೀನವಾಗದಿರೆ ಸಂಗೀತಪಥ ಶೂನ್ಯ,
ಗತಿಹೀನ ಸಂಚಲನೆ ಚುಕ್ಕಾಣಿ ಕಳೆದ ರಥ,
ಮತಿಗೆಟ್ಟ ಬೊಬ್ಬಾಟ; ಸಾಹಿತ್ಯದರಿವಿರದ
ಚತುರೋಕ್ತಿ, ಗಾರ್ದಭಾರ್ಭಟೆ ನಿಜಕು ಅತ್ರಿಸೂನು ... ೧೪

ಎತ್ತರವನೇರುವೊಡೆ ಬೇಕು ಬಲು ತಾಕತ್ತು
ಎತ್ತರದೊಳುಳಿಯುವೊಡೆ ಬೇಕು ಧೀಸಂಪತ್ತು
ಎತ್ತರವ ತೊರೆಯುವೊಡೆ ಬೇಕು ಮಿಗೆ ಬುದ್ಧತ್ವ
ಮತ್ತೇರದಿರುವಂತೆ ಬಾಳೆಲೋ ಅತ್ರಿಸೂನು ... ೧೫

ಇಚ್ಛೆಗುದುರೆಗೆ ಮಣಿದು ಹೊಸೆಯುವನು ಕುಕವಿತೆಯ,
ಅಚ್ಚುಸಾಲೆಗಳುಂಟು ಮುದ್ರಿಸಲು ಅಕ್ಕಚ್ಚು,
ಮೆಚ್ಚಿ ಹೊಗಳುವ ವಂದಿ ಮಾಗಧರ ದಂಡುಂಟು –
ಕಿಚ್ಚು ಹಚ್ಚೆಂದನಾ ಸ್ವರ್ಗಕ್ಕೆ ಅತ್ರಿಸೂನು ... ೧೬

ವಿಜ್ಞಾನ ತಂತ್ರವಿದ್ಯೆಗಳೆಂಬ ಸೇವಕರ
ಸುಜ್ಞಾನದಿಂ ಬಳಸೆ ಮನುಕುಲಕೆ ಒಳಿತಹುದು,
ಅಜ್ಞಾನದಿಂ ಮೇರೆ ಮೀರಿದರೆ ಕವಿಯುವುದು
ಪ್ರಜ್ಞಾವಿಹೀನತೆ ಕಣಾ ಜಗಕೆ ಅತ್ರಿಸೂನು ... ೧೭

ಶಿಲೆಕವಿದು ಗೊಮ್ಮಟನ ಮುಚ್ಚಿಹುದೊ? ಗೊಮ್ಮಟನೆ
ಛಲದಿಂದೆ ತಪಗೈಯೆ ಕಲ್ಕವಚವಂ ತೊಟ್ಟು
ಕುಳಿತಿಹನೊ? ದ್ರಷ್ಟಾರ ಸ್ಪರ್ಶದಲಿ ಶಿಲೆಕರಗಿ
ಕಲೆ ಬೆಳಗಿ ನಳನಳಿಪುದಿದು ಸೃಷ್ಟಿ ಅತ್ರಿಸೂನು ... ೧೮

ಬಂಜೆ ಬಲ್ಲಳೆ ಬಸುರ ಹಿತಮಧುರ ಯಾತನೆಯ?
ಸಂಜೆಯರಿತೀತೆ ಮುಂಜಾನೆಯಾ ವೈಭವವ?
ನಂಜು ತಿಳಿವುದೆ ದುಡಿಮೆಯಲ್ಲಿರ್ಪ ಆನಂದ?
ಅಂಜದೆಯೆ ಅಳುಕದೆಯೆ ನಡೆಮುಂದೆ ಅತ್ರಿಸೂನು ... ೧೯

ಎಡೆಬಿಡದೆ ನಡೆವಾತ ತಲಪದಿಹ ನೆಲೆಯಿಲ್ಲ
ಎಡಹಿದರೆ ಕಾರಣವ ಶೋಧಿಪನು, ನವಪಥವ
ಸಡಗರದಿ ಕಾಣುವನು, ಜ್ಞಾನಮೇರುವನೇರು-
ವೊಡೆ ನಿತ್ಯ ಯಾತ್ರಾರ್ಥಿಯಾಗಿರೋ ಅತ್ರಿಸೂನು ... ೨೦

ಪುಸ್ತಕವನೋದುತ್ತ ಮಸ್ತಕಕ್ಕೇರಿಸುತ
ವಿಸ್ತಾರ ದೃಷ್ಟಿ ತಳೆವವನ ಪದ ತಲದಲ್ಲಿ
ವಿಶ್ವವೇ ತೆರೆದಿಹುದು ಧರೆಗಿಳಿದ ಸಗ್ಗವದು
ವಿಶ್ವಾಸಸೇತುವೇ ಸದ್ಗ್ರಂಥ ಅತ್ರಿಸೂನು ... ೨೧

ರಾಹು ಕೇತುಗಳೆಂಬ ರಕ್ಕಸರು ನುಂಗುವರು
ಗ್ರಹಣ ಕಾಲದಿ ಸೂರ್ಯ ಚಂದ್ರರನ್ನೆನುತ ಬಲು
ತಹತಹಿಸಿ ವ್ರತ ನಿಯಮ ಬಲಿ ಹೋಮವೆಸಗುವವ
ಸಹಜಮತಿಶೂನ್ಯ ಗಾವಿಲ ಕಣಾ ಅತ್ರಿಸೂನು ... ೨೨

ವಾಸ್ತವದ ನೈಜತೆಗೆ ಕುರುಡಾದ ಮೂರ್ಖರಿಗೆ
ಉತ್ತರಕುಮಾರ ಗೋತ್ರದ ನುಡಿಕನಸಿಗರಿಗೆ
ಸತ್ಯವನ್ನೆದುರಿಸುವ ಕೆಚ್ಚಿರದ ಹೇಡಿಗಳಿ-
ಗುತ್ತಮ ಶ್ರೀರಕ್ಷೆ ಜಾತಕವೊ ಅತ್ರಿಸೂನು ... ೨೩

ಜಾತಕವ ನಂಬುತ್ತ ಪಾತಕವನೆಸಗುತ್ತ
ಘಾತಕರ ಜೀವನವ ಸತತಬಾಳುತ್ತಿರಲು
ಸೂತಕವು ತಪ್ಪೀತೆ? ವಿಷಚಷಕ ನೆರೆ ತುಂಬಿ
ಪ್ರೇತವಾಗುವುದು ದಿಟ ನಿನ್ನೊಡಲು ಅತ್ರಿಸೂನು ... ೨೪

ವಾಸ್ತವಕೆ ಶರಣಾಗಿ ಋಜು ಬದುಕ ಬಾಳೆಲೋ!
ಪ್ರೀತಿ-ನೀತಿಸ್ತರದಿ ಹೆದರದೆಯೆ ನಡೆಮುಂದೆ
ಜಾತಕಕೆ ಶರಣಾಗಿ ಹತವೀರ್ಯನಾಗದಿರು
ಮಾತು-ಕೃತಿ ಸಮರಸತೆ ಸಾಧಿಸೆಲೊ ಅತ್ರಿಸೂನು ... ೨೫

ಜ್ಞಾನಗಜಗಮನದಲಿ ವೈಫಲ್ಯವಿಲ್ಲ - ನಡೆ
ಮಾನಾಪಮಾನಗಳ ಲೆಕ್ಕಿಸದೆ. ಶೃಂಗಾಭಿ-
ಯಾನ ಕಾಣಿಸುತ ನವದೃಶ್ಯಗಳ ನಿನ್ನನು ಸ-
ದಾ ನೇವರಿಪುದು ಭರವಸೆಯ ತಳೆ ಅತ್ರಿಸೂನು ... ೨೬

ಬುದ್ಧನೆಂಬವನೇನು ಸಾಮಾನ್ಯ ಪುರುಷನೇ?
ಬುದ್ಧಿಸಂಸ್ಕಾರಕ್ಕೆ ಹೃದಯ ಸಂವೇದನೆಯು
ಬದ್ಧಗೊಂಡಾಗ ಮೈದಳೆದ ಆದರ್ಶ ಪರಿ-
ಶುದ್ಧಾತ್ಮನವ ಮನುಜಕುಲತಿಲಕ ಅತ್ರಿಸೂನು ... ೨೭

ಕೆಲಸವನು ಮಾಡುತ್ತ ಸಂತೋಷ ತಳೆವಾತ
ಸುಲಭ ಮಾರ್ಗವ ತೊರೆದು ನವ ಪಥವ ತುಳಿವಾತ
ಗೆಲುವು ಸೋಲುಗಳನ್ನು ಲೆಕ್ಕಿಸದೆ ನಡೆವಾತ
ತಿಳಿಯೊ ಜೀವನ್ಮುಕ್ತ ಸಂತೃಪ್ತ ಅತ್ರಿಸೂನು ... ೨೮

ಸಂಕಲ್ಪ-ನಿರ್ವಹಣೆ ಬ್ರಹ್ಮಗಿರಿ-ಕಾವೇರಿ
ಶಂಕರತೆ-ಕಾಳಿತ್ವ ಸಂತುಲತೆಯಲ್ಲಿರಲು
ಪಂಕದಿಂ ಚಿಗುರುವುದು ಸೌಗಂಧ್ಯ ಜಡತಾ ತ್ರಿ-
ಶಂಕುತ್ವ ಕ್ರತುಶಕ್ತಿಯಾಗುವುದು ಅತ್ರಿಸೂನು ... ೨೯

ನಗದು ಪುಸ್ತಕವನ್ನು ಒಪ್ಪವಾಗಿಟ್ಟಿರಲು
ನಗುನಗುತ ಖಾತೆಗಳು ಸಂತುಲತೆಯ್ಯೈದುವುವು
ಬಗೆನೇರ ನುಡಿಸರಳ ನಡೆಶುದ್ಧವಾಗಿರಲು
ಸೊಗದಸಿರಿ ನಲುಮೆಝುರಿ ಹರಿಯುವುವು ಅತ್ರಿಸೂನು ... ೩೦

ನಾದನಾವೆಯನೇರಿ ಋತಚಿದ್ರಸಾಬ್ಧಿಯಲಿ
ವೇದಪುರುಷನ ತಾಣವರಸುತ್ತ ತೇಲಿದೆನು
ಮೋದಪ್ರಮೋದಗಳ ನಾಡಿನಿಂ ಜಿಗಿದಂತೆ
ವೇದವೇ ನಾದದಲಿ ಲೀನಿಸಿತು ಅತ್ರಿಸೂನು ... ೩೧

ವನವಳಿಯೆ ವ್ಯಾಧ ತಾ ವ್ಯಾಘ್ರವಂ ಸಂಹರಿಪ
ವ್ಯಾಘ್ರವಿರದಾ ವನವ ಸೂರೆಗೈವನು ಮನುಜ
ವ್ಯಾಘ್ರ-ವನ ವನ-ವ್ಯಾಘ್ರ ಸಹಬಾಳ್ವೆ ಪ್ರಕೃತಿ ವಿಧಿ-
ಸಿಹ ನಿಯಮ, ಜೀವನದ ಚಿರಸೂತ್ರ ಅತ್ರಿಸೂನು ... ೩೨

ಬಳ್ಳಿಗಾಶ್ರಯ ವೃಕ್ಷ, ಮರಕೆ ರಕ್ಷಣೆ ಬಳ್ಳಿ
ವೃಕ್ಷ-ಲತೆಯೋ ಲತಾವೃಕ್ಷವೋ ! ಸಹಧರ್ಮ
ಸಹಕರ್ಮ ಸಹಮರ್ಮವೇ ಬದುಕು – ಮೂಲದಲಿ
ಧರ್ಮ, ಕಾಂಡದಿ ಕರ್ಮ, ಹೂ ಮರ್ಮ ಅತ್ರಿಸೂನು ... ೨೨

ಮೌನ ವಸನದ ಮೇಲೆ ಮಾತಿನಾ ಚಿತ್ತಾರ,
ಬಾನ ನೀಲಿಮೆ ತಲದಿ ನಕ್ಷತ್ರ ವಿಸ್ತಾರ,
ಧ್ಯಾನಲೀನನ ಮನದಿ ಮೌಲ್ಯ ಸಾಕ್ಷಾತ್ಕಾರ,
ಜ್ಞಾನ ಸಂವಹನವೇ ಋಜು ಬಾಳು ಅತ್ರಿಸೂನು ... ೨೪

ಆಗು ನಿಷ್ಠೆಯಲಿ ನೀ ಹನುಮಂತ, ಸತ್ಯ ಸಂ-
ಧತೆಯಲಿ ಹರಿಶ್ಚಂದ್ರ, ಏಕಾಗ್ರತೆಯಲಿ ರಾ-
ಧೇಯ, ಚಿರಲಕ್ಷ್ಯದಲಿ ಗಾಂಡೀವಿ, ಮನುಕುಲದ
ನಾಯಕನೆ ನೀನಾಗುವುದು ದಿಟವೊ ಅತ್ರಿಸೂನು ... ೨೫

ಅರ್ಥಕಾಮನೆಯಿಂದ ಬರೆವಾತ ವಂಚಕಂ
ಕೀರ್ತಿಲಾಲಸೆಯಿಂದ ಹೊಸೆವಾತ ಡಾಂಭಿಕಂ
ವ್ಯರ್ಥವುಭಯರ ಬದುಕು: ಮೌಲ್ಯಗಾಮಿತ್ವ ಕಾಣ್
ಸಾರ್ಥಕ್ಯ ಗಳಿಸಲಿಹ ಋಜುಮಾರ್ಗ ಅತ್ರಿಸೂನು ...೨೬

ಬೇಡವೆಂದೆನುವವನ ಪೀಡಿಸುತ ಮುತ್ತುವುದು,
ಕಾಡಿ ಬೇಡುತ ಬಯಸುವಾತನನು ಮಾರೀಚ-
ನಾಡಿದೋಲ್ ಸೆಳೆಯುವುದು – ಶ್ರೀರಾಮ ಧೃತಿಯಿಂದ
ನೋಡಿ ಬದುಕನು ನೇರ ಬಾಳೆಲೋ ಅತ್ರಿಸೂನು ... ೨೭

ತಿಳಿದವಂ ತಾನೆಂದು ತಿಳಿದವಗೆ ತಿಳಿವಿಲ್ಲ
ತಿಳಿದಿಲ್ಲ ತನಗೆಂದು ತಿಳಿದಾತ ತಿಳಿದಾತ
ಇಳೆಯೊಳಗೆ ತಿಳಿದವರು ಬಹಳಿಲ್ಲ, ವಾಸ್ತವದಿ
ತಿಳಿವಿನೆಡೆಗಿನ ಪಯಣವೇ ತಿಳಿವು ಅತ್ರಿಸೂನು ... ೨೮

ಉದ್ದೇಶ ಕುರಿತು ಸುಸ್ಪಷ್ಟ ಕಲ್ಪನೆಯಿರಲಿ
ಬದ್ಧತೆಯೆ ಕಾರ್ಯವೆಸಗಲು ಶಕ್ತಿಯಾಗಿರಲಿ
ಶುದ್ಧಪಥಗಾಮಿತ್ವ ಶ್ವಸನವಾಗಿರಲಿ, ಗುರಿ
ಸಿದ್ಧಿಸುವುದರಲಿ ಸಂಶಯವಿಲ್ಲ ಅತ್ರಿಸೂನು ... ೨೯

ಬದ್ಧವಾಙ್ಮಯವ ಹೊಸೆವಾತ ಕಾಲಾಂತರದಿ
ಮೊದ್ದನಾಗುವುದು ದಿಟ, ಅನುಭವದ ಭಾಂಡದಲಿ
ಕುದ್ದಾಗ ಸ್ವಪ್ರತಿಭೆ ಸೃಜನಶೀಲತೆ ಹೊಮ್ಮಿ
ಶುದ್ಧ ಸಾಹಿತ್ಯವರಳುವುದು ಕಾಣ್ ಅತ್ರಿಸೂನು ... ೩೦

ಅಭಿಜಾತ ಸಂಗೀತ ವಿಸ್ತರಣೆ ಕಡುಕಠಿನ
ನಭದಿಂದ ಧರೆಗಿಳಿವ ಗಂಗಾಪ್ರವಾಹವದು
ರಭಸವಂ ಧರಿಸಿ ಗಾನಾಮೃತವ ರಸಿಕರಿಗ-
ನುಭವಿಸಲೊದಗಿಸುವಾ ಶಿವನಾಗು ಅತ್ರಿಸೂನು ... ೪೧

ಕೊಟ್ಟದ್ದು ಬೆಳೆಯುವುದು, ಇಟ್ಟದ್ದು ಕೊಳೆಯುವುದು,
ಬಿಟ್ಟದ್ದು ಹಾರುವುದು, ಕಟ್ಟಿದ್ದು ನವೆಯುವುದು,
ನೆಟ್ಟದ್ದು ಕೊನರುವುದು, ಕಡಿದದ್ದು ಕಮರುವುದು
ಕೊಟ್ಟು ಕೆಟ್ಟವರಿಲ್ಲವೋ ಜಗದಿ ಅತ್ರಿಸೂನು ... ೪೨

ಪ್ರಕೃತಿಯಲಿ ಸಹಬಾಳ್ವೆ ಸಾಮಾನ್ಯ ನಿಯಮವೋ!
ಪ್ರಕೃತಿಪುತ್ರನು ನೀನು, ಬದುಕಿನಲಿ ಮಾಡುತಿರು
ಸುಕೃತಿಯನು, ಸ್ವಾರ್ಥಿಯಾದೊಡೆ ಖಾತ್ರಿ ಪಳೆಯುಳಿಕೆ
ವಿಕೃತಿಯಾಗುತ ನಾಶಗೊಳುವೆಯೋ ಅತ್ರಿಸೂನು ... ೪೩

ಸ್ಥಾನಬಲಕುಂಟು ಮಿತಿ, ಬಿದ್ದಾಗ ನೆಲವೆ ಗತಿ,
ಜ್ಞಾನಬಲಕಿಲ್ಲ ಕೊನೆ, ಏರುತಿರೆ ಗಡಿ ಬಾನೆ!
ಮಾನಬಲ ಜ್ಞಾನದಿಂದೊದಗುವುದು, ಗಳಿಸಲಿದ
ಧ್ಯಾನಬಲವೇ ಶರಣು – ತಿಳಿಯೆಲೋ ಅತ್ರಿಸೂನು ... ೪೪

ಸಂತಪ್ತ ಜೀವನದಿ ನವೆವಾತ ಜನದೂರ,
ಸಂತೃಪ್ತ ಬಾಳಿನಲಿ ಸುಖಿಸುವವ ಜನಪ್ರೇಮಿ,
ಮಂಥರೆಯೊ ಮೈಥಿಲಿಯೊ ಹೊರಗಿಲ್ಲವೆಂದರಿಯೊ
ಅಂತಃಕರಣದ ಪ್ರತಿಬಿಂಬಗಳು ಅತ್ರಿಸೂನು ... ೪೫

ಕಾಣು ಧರ್ಮದ ಮೂಲ ದಯದೊಳೆಂದಿತು ಸಂತ-
ವಾಣಿ – ಆಚರಣೆಯಲಿ? ಭೈರವನ ತಾಂಡವವು
ಗೋಣು ಕತ್ತರಿಸುತಿದೆ ಸೋದರರ, ಬೇಕಿಲ್ಲ
ಜಾಣತನ, ನೈತಿಕತೆಯೇ ಶರಣು ಅತ್ರಿಸೂನು ... ೪೬

ಹನಿಯೊಂದು ಸಾಗರಕೆ ನಮಿಸಿ ನುಡಿಯಿತು, "ಎಲೈ
ಘನಮಹಿಮ! ನಿನ್ನಾಳ ನಾನರಿಯೆ, ಸಲ್ಲಿಪೆನು
ಮನತುಂಬಿ ವಂದನೆಯ!" "ಅಣುರೂಪಿ! ನೀನಿರದೊ-
ಡೆನಗೆಲ್ಲಿ ನೆಲೆ? ಸ್ವೀಕರಿಸು ನಮನ" ಅತ್ರಿಸೂನು ... ೪೭

ಗಾಣಕ್ಕೆ ಹೆಗಲೊಡ್ಡಿ ಸಿದ್ಧ ಜಾಡೊಳು ಸದಾ
ಗಾಣಿಗನ ಆಣತಿಗೆ ಮಣಿದು ನಡೆಯುವ ಮೂಕ
ಪ್ರಾಣಿಗಿಮದೇ ಆಯ್ಕೆ ಸ್ವಾತಂತ್ರ್ಯ? ಕಬ್ಬೊ
ಕಬ್ಬಿಣದ ಕಡಲೆಯೊ? ಸುತ್ತುವುದೆ ಕಸಬು ಅತ್ರಿಸೂನು ... ೪೮

ಪರಿಶುಭ್ರ ಕಾಂತಿಯುತ ರತ್ನಗಳು ಗಹನ ಸಾ-
ಗರ ಗಹ್ವರಂಗಳಲಿ ಮರೆಯಾಗಿ ಮಸಳುತಿವೆ
ಅರಳಿ ಕಾಂತಾರದೇಕಾಂತದಲಿ ಪುಷ್ಪಗಳು
ಪರಿಮಳಿಸಿ ನಲುಗುತಿವೆ – ಕಣ್ತೆರೆಯೊ ಅತ್ರಿಸೂನು ... ೪೯

ಚಾರಣಿಗರೆದುರಿನಲಿ ತೆರೆದಿಹುವು ನೂರೆಂಟು
ದಾರಿಗಳು, ಕಡುಕಠಿನವಾದುದನ್ನಾಯುವನು
ಧೀರ, ಗುರಿ ಸೇರಿದೊಡೆ ನವಮಾರ್ಗವೊದಗುವುದು.
ಸೇರದಿರೆ? ಸಾಹಸಕೆ ಚ್ಯುತಿಯುಂಟೆ? ಅತ್ರಿಸೂನು ... ೫೦

ಕತ್ತಲೆಯ ಸೆರೆಯಲ್ಲಿ ನವೆಯುತಿರುವಾಗ ನೆನೆ
ವತ್ಸ ಕೃಷ್ಣನ ಜನನ, ರಾಮಸತಿ ಬಂಧನವ
ಚಿತ್ರಿಸಿಕೊ: ಬರಲಿಹುದು ಬೆಳಕು ದಿಟ ವಸುದೇವ
ವಾತ್ಸಲ್ಯ ಹನುಮಂತ ನಿಷ್ಠೆಯಲಿ ಅತ್ರಿಸೂನು ... ೫೧

ಇರುಕಿನಲಿ ಹನಿಯೊಸರಿ ಬಲ್ಲೆಯಲಿ ನೀರುಂಡು
ಬಿರುಕಿನಲಿ ಹೊರಜಿನುಗಿ ಬಂಡೆಮಂಡೆಯನೈದಿ
ಭರದಿಂದ ಕೆಳದುಮುಕಿ ಹಚ್ಚ ಹಸುರುಡೆ ಧರೆಗೆ
ಬರೆವ ನದಿಯಂತಿರಲಿ ಜೀವನವು ಅತ್ರಿಸೂನು ... ೫೨

ಸ್ಪರ್ಧೆಯಿಂ ದೂರವಿರು ಗೆಲುವು ಸೋಲುಗಳೆಂಬ
ಮರ್ದನಕ್ಕೀಡಾಗದಿರು, ನಿನ್ನ ಗುರಿ ಸದಾ
ಶುದ್ಧವಾಗಿರಲಿ ಪಥ ಧರ್ಮಸಮ್ಮತವಿರಲಿ
ವೃದ್ಧಿ ಸಂವರ್ಧಿಪುದು ನಡೆಮುಂದೆ ಅತ್ರಿಸೂನು ... ೫೩

ದೇವರೆಂಬುವುದೇನು? ಸೃಷ್ಟಿಸಾಂಗತ್ಯದಲಿ
ಜೀವವೈವಿಧ್ಯದಲಿ ಮಿಡಿವ ಸಂಗೀತವದು
ಭಾವಶುದ್ಧಿಯ ಬಾಹ್ಯ ಚಿಹ್ನೆಯದು, ಚಿಂತಿಸಲು
ಸಾವಧಾನದಿ ನೀನೆ ಪರಮಾತ್ಮ ಅತ್ರಿಸೂನು ... ೫೪

ರಕ್ಷಣೆಯನೊದಗಿಸಲು ಕಟ್ಟಿದನು ಕೋಟೆಯನು
ದಕ್ಷ ರಾವುತರ ಕಾವಲನಿಟ್ಟುಕೊಂಡನವ
ತಕ್ಷಕಾಗಮನವಿವು ತಡೆದುವೇ? ತಿಳಿಯೋ ಪ-
ರೀಕ್ಷಿತನ ದುರ್ಮರಣ ವಿಧಿಲಿಖಿತ ಅತ್ರಿಸೂನು ... ೫೫

ವೃಕ್ಷಗಳ ತರಿದೊಗೆದ ಬಳಿಕ ಧರೆ ಬೆಂಗಾಡು.
ಪಕ್ಷಿಸಂಕುಲವೆಲ್ಲಿ? ಪ್ರಾಣಿಗಳು? ಸುಡುಗಾಡು.
ನಕ್ಷತ್ರಗಳು ಮಸಣದಿಂ ಸಿಡಿದ ಕಿಡಿಗಳಾ-
ರಕ್ಷಕರೆ ಭಕ್ಷಕರು ತಪ್ಪೆಲ್ಲಿ? ಅತ್ರಿಸೂನು ... ೫೬

ನಾಟಕವ ನೋಡು ರಂಗಾಯಣದ ಮೋಡಿಯಲಿ
ನೋಟಕನ ನಟನಾಗಿ ಬೆಸೆಯುವೀ ಮೂಸೆಯಲಿ
ಆಟಕ್ಕೆ ಕಥೆಯುಂಟು: ಮನುಕುಲದ ಚಿರನವ್ಯ
ಪಾಠವದು ಕಲಿಬದುಕು, ಕಲೆಯಾಗು ಅತ್ರಿಸೂನು ... ೫೭

ವೀಣೆ ಶೇಷಣ್ಣ ಭವನವ ನೀನು ನಿರ್ಮಿಸಿದೆ?
ಬಾನಿನಿಂ ಚೈತನ್ಯವಿಳಿದಿಳೆಗೆ ಘನಿಸುತಾ
ಗಾನಲೋಲನಿಗರ್ಪಿಸಿತು ಚಿರಂತನ ನಮನ
ನೀನಿಲ್ಲಿ ಕೇವಲ ನಿಮಿತ್ತನೈ ಅತ್ರಿಸೂನು ... ೫೮

ನಕ್ಷತ್ರಲೋಕದಲಿ ಲಕ್ಷಕ್ಕೆ ಬೆಲೆಯಿಲ್ಲ
ಲಕ್ಷ್ಯವೊಂದೇ ಪರಮಗಮ್ಯ. ತ್ವರೆಯಿಂದ ತೆರೆ
ಚಕ್ಷುವಂ, ತೊರೆ ಅಹಂಕಾರವಂ, ನಡೆದಂತೆ
ಸಾಕ್ಷಾತ್ಕರಿಪುದಲ್ಲಿ ತೇಜಸ್ಸು ಅತ್ರಿಸೂನು ... ೫೯

ನೇರಬಗೆ, ಧೀರನಡೆ, ಶೂರನುಡಿ – ಜೀವನದಿ
ಹಾರಲಾಗದ ಬೀಸು, ದುಮುಕಲಾಗದ ಕಮರಿ
ಏರಲಾಗದ ಶೃಂಗವೆಲ್ಲಿಹವು? ನೇಸರಿನ
ದಾರಿಯಲಿ ಕತ್ತಲೆಗೆ ನೆಲೆಯೆಲ್ಲಿ? ಅತ್ರಿಸೂನು ... ೬೦

ಕಾರ್ಯಮಂಥನದಲ್ಲಿ ಗರಳ ಬರೆ ಕೊರಳಿನಲಿ
ಧೈರ್ಯದಿಂ ಧರಿಸುವಾ ಶಿವನಾಗು, ಸುಧೆಯೊಸರೆ
ಸ್ಥೈರ್ಯದಿಂ ಹಂಚು ಮೋಹಿನಿಯಂತೆ ಮನುಕುಲಕೆ
ಆರ್ಯತ್ವಮಿದು ಕಣಾ ಬಾಳಿನಲಿ ಅತ್ರಿಸೂನು ... ೬೧

ಅಪರಿಗ್ರಹದಲುಂಟು ಸಂತೋಷ ಸಮೃದ್ಧಿ
ಸ್ವಪರಿಗ್ರಹದಲಿಲ್ಲ ನಿರ್ಮೋಹ ನಿರಸೂಯೆ
ನೃಪನಾತ ಧಾರಿಣಿಗೆ ಕೃಪನೀತ ಕೌರವಗೆ
ತಪನ ಪ್ರಕಾಶದೋಲ್ ಬಾಳೆಲೋ ಅತ್ರಿಸೂನು ... ೬೨

ಜಯಕುಂಟು ನೂರೆಂಟು ಹೆತ್ತವರು, ಸೋಲನು ಜ-
ರೆಯಲಿಹವು ನೂರಾರು ಬಾಯಿಗಳು – ನಿರ್ಲಿಪ್ತ
ಜಯದಿಂದ ಹಿಗ್ಗದೆಯೆ ಸೋಲಿಂದ ಕುಗ್ಗದೆಯೆ
ನಯವಾಗಿ ನಡೆಯುತಿರ್ಪನು ಸದಾ ಅತ್ರಿಸೂನು ... ೬೩

ಗಣ್ಯನಾಗಿರುವುದತಿ ಧನ್ಯ, ನಿಜ ಪೇಳುವೊಡೆ
ಮಾನ್ಯನಾಗಿರುವುದತಿಶಯ ಧನ್ಯ – ಸಿದ್ಧಾರ್ಥ
ಗಣ್ಯ ದಲ್, ಬುದ್ಧನೋ ಬಹುಮಾನ್ಯ, ಮೀರುತ್ತ
ಗಣ್ಯತೆಯ ಗಳಿಸೆಲೋ ಮಾನ್ಯತೆಯ ಅತ್ರಿಸೂನು ... ೬೪

ಏರಿರದ ಬಂಡೆಗಳು ಧರೆಯೊಳಗೆ ನೂರಾರು
ಏರಲಾಗದ ಶಿಖರ ಸೃಷ್ಟಿಯೊಳಗಿಲ್ಲವೋ
ದಾರಿ ಕಡಿಯುತ ಹೆಜ್ಜೆಯಿಡುವಾತ ದಿಟ್ಟ ದಿಟ
ಬಾರಿಬಾರಿಗು ಹೊಸತ ಕಾಣುವನು ಅತ್ರಿಸೂನು ... ೬೫

ಪ್ರೀತಿ: ತಪ್ಪನು ತಿದ್ದಿ ಸರಿದಾರಿ ಕಾಣಿಪುದು;
ನೀತಿ: ಮೇರೆಯ ವಿಧಿಸಿ ಋಜುಪಥಕ್ಕೊಯ್ಯುವುದು;
ಪ್ರೀತಿ-ನೀತಿಗಳೆರಡು ಸಂಗಳಿಸೆ ಬಾಳಿನಲಿ
ಮಾತು-ಕೃತಿಗಳಭಿನ್ನವೆನಿಸುವುವು ಅತ್ರಿಸೂನು ... ೬೬

ಹಳೆಯದನು ತೊರೆದು ಹೊಸಬೆಳಕನರಸುವವ ಋಷಿ,
ಈ ಬೆಳಕ ಬೀರುವವನಾಚಾರ್ಯ, ಆಚಾರ್ಯ-
ಮಾರ್ಗವನು ಶಿಷ್ಯನಿಗೆ ಪೇಳುವವ ಗುರು, ಶಿಷ್ಯ
ಋಷಿಯಾಗಿ ಬೆಳಗುವುದೆ ಋಜುವಿದ್ಯೆ ಅತ್ರಿಸೂನು ... ೬೭

ಇಚ್ಛೆಯೆಂಬೋ ಕುದುರೆಯನ್ನೇರಿ ಮನದೊಳಗೆ
ಎಚ್ಚರಿಕೆಯೆಂಬೋ ಲಗಾಮನ್ನು ಬಿಗಿಡಿದು
ಕೆಚ್ಚೆಂಬ ಚಬಕನು ಲಗಾಯಿಸಲು ಚಕ್ಕಡಿಯು
ಹೊಚ್ಚ ಹೊಸ ಹಸುರುಗಳ ಸೃಷ್ಟಿಪುದು ಅತ್ರಿಸೂನು ... ೬೮

ಚಿಂತನೆಯ ಕಡಲಿನೊಳಗುಲ್ಲಾಸ ನಾವೆಯಲಿ
ಸಂತತ ಮಹಾಯಾನಗೈದಿರುವ ಧೀಶಕ್ತಿ,
ಅಂತವಿಲ್ಲದ ಸಂತಸವ ಧಾರೆಯೆರೆವ ಪ್ರ-
ಶಾಂತಮತಿ! ನಿನಗಿದೋ ಚಿರನಮನ ಅತ್ರಿಸೂನು ... ೧೯

ಮರುಭೂಮಿಯೆನ್ನುತ್ತ ತೆಗಳದಿರು, ಹಸುರುನೆಲ-
ದಿರವನ್ನು ಭದ್ರಗೊಳಿಸುವ ಮೂಕ ತಾಣವದು,
ಧರಣಿಯಲಿ ಸಮತೋಲ ಸಾಧಿಸಲು ಪ್ರಕೃತಿ ಹೂ-
ಡಿರುವ ತಂತ್ರವದು ತಿಳಿ ಈ ತತ್ತ್ವ ಅತ್ರಿಸೂನು ... ೨೦

ನಾಡೊಳರಮನೆ ಕಟ್ಟಿ ಸಮೃದ್ಧಿ ಕೊಡಿ ತಲಪಿ
ನೋಡಲಾಚೆಗೆ ಕಂಡೆ ಬಾಳಿನ ದುರಂತವನು
ಕಾಡೊಳು ಕುಟೀರ ನಿರ್ಮಿಸಿ ನೆಲಸಿ ಪಡೆದೆನಾ
ಬೀಡಿನಲಿ ಸಂತೃಪ್ತಿ ಸಂತೋಷ ಅತ್ರಿಸೂನು ... ೨೧

ತಳಭದ್ರವಿಲ್ಲದಿರೆ ಪಥಗಮನ ನಡುಗುವುದು
ಗಳಶುದ್ಧವಿಲ್ಲದಿರೆ ನಾದಗತಿ ನಲುಗುವುದು
ಒಳಶುಚಿಯು ಮಲಿನವಾದರೆ ಶೀಲ ಮಸಳುವುದು
ತಳ-ಗಳ-ಒಳ ಮಿಲನವೆ ಸಂತೃಪ್ತಿ ಅತ್ರಿಸೂನು ... ೨೨

ನೀತಿಹಾಸಿದ ಪಥದಿ ಪ್ರೀತಿಯಿಂ ನಡೆಯೆಲೋ
ಪ್ರೀತಿ ಕಾಣಿಪ ದೃಶ್ಯ ನೀತಿಯಿಂ ದೃಢಪಡಲಿ
ನೀತಿರಹಿತನ ಪ್ರೀತಿ ಧೃತರಾಷ್ಟ್ರ ವ್ಯಾಮೋಹ
ಪ್ರೀತಿರಹಿತನ ನೀತಿ ಗೌತಮತೆ ಅತ್ರಿಸೂನು ... ೭೩

ಇಲ್ಲೊಂದು ರಸಲೋಕ ಕೈಬೀಸಿ ಕರೆಯುತಿದೆ:
ನಿಲ್ಲಯ್ಯ ರಸಿಕಾ! ಸುನಾದ ಮಾಧುರ್ಯದಲಿ
ಮೆಲ್ಲಯ್ಯ ರಸಕವಳ! ಭಾವ-ರಸ ಐಕ್ಯವೇ
ಚಿಲ್ಲೋಕ ಅಭಿಯಾನ ನೋಡಿಲ್ಲಿ ಅತ್ರಿಸೂನು ... ೭೪

ಮಹದಾಶಯವ ತಳೆದು ಕನಸು ಕಾಣುತ ಕುಳಿತು
ಗ್ರಹಗತಿಯ ಕಾದವನು ಸೋಲುವನು, ಕೆಲಸ ನಿ-
ರ್ವಹಿಸಲೆನ್ನುತ ಮುಂದೆ ನಡೆದವನು ಗೆಲ್ಲುವನು
ರಹದಾರಿ ಕಾಯಕವೆ ವಿಜಯಕ್ಕೆ ಅತ್ರಿಸೂನು ... ೭೫

ಜನುಮದಿಂದೊಂಧು ಚಿನ್ನದ ಕೀಲಿ ದತ್ತವಿದೆ
ಮನುಜನಿಗೆ – ತೆರೆಯಬಲ್ಲುದದು ಸಗ್ಗದ ಬೀಗ-
ವನು, ನರಕಬೀಗವನು ಸಹ! ವಿವೇಚನೆಯ ತಳೆ.
ಮನವೆ ತಿಳಿ! ನಿನ್ನೊಳಿಹುದಾ ಸೂತ್ರ ಅತ್ರಿಸೂನು ... ೭೬

ಸಂತನೆಂಬವನಾರು? ಕುರಿಹಿಂಡಿನಲ್ಲಿರದ
ಸ್ವಂತ ಚಿಂತನಶೀಲ, ಸವೆದ ಜಾಡನು ಬಿಟ್ಟು
ಮಂಥನಕೆ ನವವಸ್ತು ಶೋಧಿಸುವ ಪರಮ ಸ್ವ-
ತಂತ್ರಮತಿ ಆದರ್ಶ ಯುಗಪುರುಷ ಅತ್ರಿಸೂನು ... ೭೭

ಅಗ್ರಾಹ್ಯದೆದುರಿನಲಿ ಮೌನವೇ ಅಭಿವ್ಯಕ್ತಿ
ವಿಗ್ರಹಿಸಲಸದಳವದನು ಸಾಂತ ಪದಗಳಲಿ
ಸುಗ್ರಾಸ ನಿನ್ನಂತರಾತ್ಮಕದು, ದೊರೆಯದು ಸ-
ಮಗ್ರತೆಯ ಚಿತ್ರವೆಂದೂ ನಿನಗೆ ಅತ್ರಿಸೂನು ... ೭೮

ಹಳೆಬೇರು ಅಂದನ್ನು, ನಡುಕಾಂಡವಿಂದನ್ನು
ತಿಳಿಚಿಗುರು ಮುಂದನ್ನು ಬಿಂಬಿಸುವ ಪ್ರತಿಮೆಗಳು
ಮಿಳಿತವಾಗಿರಲಿವು ಪ್ರಮಾಣದಲಿ ಬದುಕು ಬೆಳ-
ಬೆಳಗುತ್ತ ಬೀರುವುದು ಉಲ್ಲಾಸ ಅತ್ರಿಸೂನು ... ೭೯

ಕಾಲ್ಪನಿಕ ಕಷ್ಟಗಳು ವಾಸ್ತವವ ಮೀರಿ ನಿ-
ನ್ನಲ್ಪತೆಯ ನಿನಗೆತ್ತಿ ಕಾಣಿಪವು. ತಳೆ ಧೈರ್ಯ
ಕಲ್ಪಣೆಯೊ ಕ್ರಕಚವೋ ನಡೆಮುಂದೆ ಕಾದಿಹುದು
ತಲ್ಪ ನಿನ್ನನು ಸ್ವಾಗತಿಸಲೆಂದು ಅತ್ರಿಸೂನು ... ೮೦

ಕದತಟ್ಟಿ ಕರೆಯುತಿಹ ಜವರಾಯನಲ್ಲಿ! ನಾ
ಬದುಕಲೇಬೇಕೆಂದು ಕುಳಿತಿರುವೆನಿಲ್ಲಿ! – ಜಗ-
ವೊದಗಿಸಿದ ಮೂಲದಾ ಬಡ್ಡಿಯೇ ತೀರಿಲ್ಲ
ಅದಟುಂಟು ಲೆಕ್ಕ ಚುಕ್ತಾಗೊಳಿಸೆ ಅತ್ರಿಸೂನು ... ೮೧

ಆಪಾತ ಮಧುರ ಹಿಂದೂಸ್ತಾನಿ, ಆಲೋಚ-
ನಾಮೃತಂ ಕರ್ನಾಟ ಸಂಗೀತ, ಉಭಯ ಪ್ರ-
ವಾಹಗಳ ಮೇಳನವೆ ಆನಂದದಾ ಮೂಲ:
ಹೃದಯ-ಮಿದುಳುಗಳ ಪರಿಪಾಕವೋ ಅತ್ರಿಸೂನು ... ೮೨

ನಡೆಯುವುದು ಸಹಜ ಗುಣ, ನಡೆಸುವುದು ಪರಮ ಗುಣ
ನಡೆಯಿಂದ ಬಗೆ ಶುದ್ಧ, ಬಗೆಯಿಂದ ನುಡಿ ಬದ್ಧ,
ನುಡಿಯಿಂದ ನಡೆ ಸಿದ್ಧ – ಬದುಕಿನಲಿ ಸಮರಸತೆ
ಪಡೆಯಲಿದು ಐಕ್ಯೈಕ ರಾಜಪಥ ಅತ್ರಿಸೂನು ... ೮೩

ಪಾಡಲು ಸರಸ್ವತಿ ವಿಪಂಚಿಯಲಿ, ಸಹಯೋಗ
ನೀಡಿದರು ಕೃತ್ತಿಕಾ ದೇವಿಯರು, ತಾರೆ ಜೊತೆ-
ಗೂಡಿಸಿತು ಶ್ರುತಿ, ದೇವಗಾನವಿದೆನುತ್ತ ಕೊಂ-
ಡಾಡಿದರು ಗಂಧರ್ವ ಶ್ರಾವಕರು ಅತ್ರಿಸೂನು ... ೮೪

ಆವ ಗಾಳಿಯದಾವ ಸುಸ್ವನವ ಧರಿಸಿಹುದೊ!
ಆವ ಸುಸ್ವನದ ಮೂಲವದಾವ ಕೋಗಿಲೆಯೊ!
ಜೀವನ ರಹಸ್ಯವಿದು, ಶೋಧಕನು ನೀನಾಗು
ಭಾವಮೂಲವನರಸಿ ಸಾಗುತಿರು ಅತ್ರಿಸೂನು ... ೮೫

ಕಾಗದವು ಬಂದಾಗ ತತ್‌ಕ್ಷಣವೆ ನಿಷ್ಕ್ರಮಿಸೆ
ಬಾಗಿಹೆನು ಮುದದಿಂದ, ನಗದು ಪುಸ್ತಕವೊಪ್ಪ-
ವಾಗಿರಲು ಖಾತೆಗಳು ಸಂತುಲತೆಯಲ್ಲಿದ್ದು
ನೀಗುವುವು ಕಷ್ಟ ಕಾರ್ಪಣ್ಯಗಳ ಅತ್ರಿಸೂನು ... ೮೬

ಗುಡಿಸಲಿನ ಹಣತೆಯೊಳೊಲುಮೆ ತೈಲ, ನಗು ಬೆಳಕು,
ಸಡಗರದ ಸಹಜ ವರ್ತನೆಯೊಡವೆ! ನಭರೇಖೆ-
ಯೊಡೆವ ಸೌಧದಿ ಬಾಳು ಬಂದಿ, ಬಗೆ ಹೊಲಸು, ನುಡಿ
ನಡೆ ಸದಾ ಒಡೆದ ಗಡಿಗೆಯ ಹರಟೆ ಅತ್ರಿಸೂನು ... ೮೭

ವಿಜ್ಞಾನಮಾರ್ಗದಲಿ ಋತವನನ್ವೇಷಿಸಲು
ನಡೆದನಿವ, ಅಧ್ಯಾತ್ಮ ಚಿಂತನೆಯೊಳನವರತ
ಸತ್ಯ ಶೋಧಿಸಲಾತ ಮುಂದಾದ – ಸಂಧಿಸಿದರು–
ಭಯರೊಂದೆಡೆಯೊಳಿದು ಬಲುಚೋದ್ಯ ಅತ್ರಿಸೂನು ... ೮೮

ವೇದನೆಯ ಭಾಂಡದಲಿ ನೀಕುದಿಯೆ ಹೊಮ್ಮುವುದು
ಶೋಧನೆಯ ತವಕ, ಮುನ್ನಡೆದಂತೆ ಸಿದ್ಧಿಪುದು
ಸಾಧನೆ, ಸಮಾಜಕದನರ್ಪಿಸಲು ಮುಂದಾಗು:
ಬೋಧನೆಯು ಬೇರುಂಟೆ? ಬೇಕಿಹುದೆ? ಅತ್ರಿಸೂನು ... ೮೯

ತಾಳುವಿಕೆಗಿಂತನ್ಯ ತಪವಿಲ್ಲ – ಸಂತನುಡಿ
ಕೇಳುವಿಕೆಗಿಂ ಮಿಗಿಲು ಸುಖವಿಲ್ಲ – ರಸಿಕೋಕ್ತಿ
ತಾಳ್ಮೆ-ಕೇಳ್ಮೆಗಳ ಸವಿಯನುಭವವೆ ರಸಸೃಷ್ಟಿ,
ಬಾಳಬಟ್ಟೆಯ ಶೃಂಗ, ಕೈಲಾಸ ಅತ್ರಿಸೂನು ... ೯೦

ಕುಮ್ಮಕ್ಕು ಕೊಟ್ಟಾಗ ಕಪಿ ಕಡಲ ಜಿಗಿಯುವುದು
ಕಿಮ್ಮತ್ತು ಹೂಡದೇ ಯಶವಿಲ್ಲ, ಕಜ್ಜದಲಿ
ಗಮ್ಮತ್ತು ಗಳಿಸುವುದೆ ನಿಜ ತೃಪ್ತಿ – ಚಿಂತಿಸುತ
ಸುಮ್ಮನೆಯೆ ಕಾಲವನು ಕಳೆಯದಿರು ಅತ್ರಿಸೂನು ... ೯೧

ಅಪರಿಗ್ರಹಾದ್ವೇಷ, ನಿರ್ಮೋಹ, ನೈತಿಕತೆ,
ತಪನಪ್ರಕಾಶದೋಲ್ ಪಾರಕತೆ ಸಂಗಳಿಸೆ
ಜಪವೇಕೆ? ತಪ ಬೇಕೆ? ವ್ಯಕ್ತಿ ಜೀವನ್ಮುಕ್ತ
ಸಫಲತೆಯೆಡೆಗಿನ ಋಜು ಮಾರ್ಗವಿದು ಅತ್ರಿಸೂನು ... ೯೨

ಆದರ್ಶ ಮಾರ್ಗವನು ಮಲ್ಲಿಗೆಯ ಪಕಳೆಗಳ-
ನಾಧರಿಸಿ ರಚಿಸಿಲ್ಲ; ಕಂಟಕವನೆದುರಿಸುತ
ಸಾಧನೆಯ ನಿಃಸ್ವಾರ್ಥ ನೀತಿಯುತ ಭಾವದಿಂ
ಗೈದವಂ ದೀಪ್ತಿಸುವ ಹಾದಿಯದು ಅತ್ರಿಸೂನು ... ೯೩

ಸೌಂದರ್ಯಮೂಲ ಯಾದೃಚ್ಛಿಕತೆ, ಪ್ರಕೃತಿಯಲಿ
ಸಿಂಧುವಾಗದು ಕವಾಯತಿಯ ವಿಧಿ! ನಕ್ಷತ್ರ
ಬಂಧುಗಳ, ಜಲಧಿ, ನೆಲ ಹರವುಗಳ ನೋಡಿ ಕಲಿ
ಸುಂದರತೆಯೋ ನಿಸರ್ಗದ ಭಾಷೆ ಅತ್ರಿಸೂನು ... ೯೪

ನಷ್ಟಗಳನೆಣಿಸುತ್ತ ಕಾಲ ಕಳೆಯದಿರು ನಿ-
ನ್ನಿಷ್ಟ ವಿಷಯಾನುಶೀಲನೆಯಲ್ಲಿ ಕಾಣು ಸುಖ
ಕಷ್ಟಗಳನೆದುರಿಸುವ ತಾಕತ್ತು ಮೂಡುವುದು
ಸೃಷ್ಟಿಯಲಿ ಬಿಟ್ಟಿ ಕೂಳಿಲ್ಲವೋ ಅತ್ರಿಸೂನು ... ೯೫

ವೈಫಲ್ಯವೆದುರಾಗಲಾತ್ಮಶೋಧನೆ ಮಾಡು
ಸಾಫಲ್ಯ ಬಂದಾಗ ವಿನಯದಿಂ ಶಿರಬಾಗು
ಕಾಪಟ್ಯದೂರವಿರು, ಪಾರಕತೆ ನೈಷ್ಠಿಕತೆ
ಕಾಪಾಡುವುವು ಧೈರ್ಯದಿಂ ಸಾಗು ಅತ್ರಿಸೂನು ... ೯೬

ಪಕ್ಷಪಾತವಮಾಡಿ ಕಟ್ಟದಿರು ಸೌಧವನು
ತಕ್ಷಕನ ವಿಷದಂತೆ ತುಸತುಸವೆ ಪಸರಿಸುತ
ವೃಕ್ಷ ರೋಗಗ್ರಸ್ತವಾಗುವುದು – ವಿಷಫಲವ
ಭಕ್ಷಿಸುತ ನಾಶವಾಗುವೆ ನೀನು ಅತ್ರಿಸೂನು ... ೯೭

ಶಿಷ್ಯಪ್ರಗತಿಕಂಡು ಕಂಡು ಕರುಬುವಾ ಗುರು ಪರಮ
ದೂಷ್ಯ, ಮನುಕುಲವೈರಿ; ತನಗೆ ಬಂದುದ ತಾನು
ಶಾಶ್ವತೀಕರಿಪ ಪರಿ ಹೊಸ ಚಿಗುರುಗಳ ಬೆಳೆಸಿ
ವಿಶ್ವಕರ್ಪಿಪ ದಿವ್ಯ ಸನ್ಮಾರ್ಗ ಅತ್ರಿಸೂನು ... ೯೮

ಸ್ವಂತ ಸಾಮರ್ಥ್ಯದಲಿ ಭರವಸೆಯ ತಳೆ, ಮನದಿ
ಚಿಂತನೆಯನೆಸಗಿ ಪ್ರಕೃತಿಯಿಂದ ರಸ ಹೀರಿ
ಸಂತತ ಪರಿಶ್ರಮವ ಹೂಡುತಿರು ಸಾಧನೆಗೆ
ಮಂಥನಕ್ಕಂತ್ಯವೇ ಬಾರದೋ ಅತ್ರಿಸೂನು ... ೯೯

ಮಾಡಿಯೂ ಮಾಡದವ ದಾಶರಥಿ, ಮಾಡದೆಯೆ
ಮಾಡಿದವ ಗೋಪಾಲ: ರಾಮಕೃಷ್ಣರ ಮಾರ್ಗ
ಗಾಡಿನಡೆಸಲು ನಿನಗೆ ರಹದಾರಿ, ತೃಪ್ತಿರಘುರಿ
ನೀಡವಂ ನಾಡಾಗಿಸುವ ಪರಿ ಅತ್ರಿಸೂನು ... ೧೦೦

ಜನ ತುಳಿದ ಜಾಡಿನಲಿ ನಡೆಯನಿವ ಸ್ವಂತ ಪಥ-
ವನ್ನರಸಿ ಕಾಡುಮೇಡುಗಳಡ್ಡ ಸಾಗುವನು –
ತನುವಿಗಂಜುವುದುಂಟೆ? ಮನಕಧೀನವದೆಂದು
ದಿನದಿನಂ ಧಾವಿಸುವ ಕೊಡಿಯೆಡೆಗೆ ಅತ್ರಿಸೂನು ... ೧೦೧

ಪಾಣಿಗ್ರಹಣದಲಿದೆಯೊಂದು ಭರವಸೆ : ನೀನು-
ನಾನು ಪೂರಕ ಪೋಷಕ ಪ್ರಭಾವಗಳಿನ್ನು,
ಮಾನವಕುಲೋದ್ಧಾರವೆಮ್ಮ ಹೊಣೆ! ಇಗೊ ನಿಮ್ಮ
ಆನಂದಚಷಕ ತುಂಬಿ ತುಳುಕಲಿ! ಅತ್ರಿಸೂನು ... ೧೦೨

ನಡೆಶುದ್ಧ ನುಡಿಶುದ್ಧ ಬಗೆಶುದ್ಧನಿವ ಬುದ್ಧ
ಒಡಲಿನಲಿ ಕರಣದಲಿ ಮನದಲಿ ಸದಾ ಬದ್ಧ
ಬಡತನ ಮರಣದಂಜಿಕೆ ನಿವಾರಣೆಗೆ ಸಿದ್ಧ
ಕೊಡುವಾತ ಕೆಡನೆಂದನೀ ಭದ್ರ ಅತ್ರಿಸೂನು ... ೧೦೩

ಪುಸ್ತಕದೊಳಡಗಿರುವ ಜ್ಞಾನವಿಜ್ಞಾನಗಳು
ಮಸ್ತಕದಿ ನೆಲೆನಿಂತು ಹದಗೊಂಡು ಕೃತಿಯಾಗಿ
ಹಸ್ತದಲಿ ಪ್ರಕಟವಾಗುವುದೆ ಋಜುವಿದ್ಯೆ ತಿಳಿ
ವಿಸ್ತಾರಮತಿಯಾಗಿ ಬಾಳೆಲೋ ಅತ್ರಿಸೂನು ... ೧೦೪

ಮೂಢನಂಬಿಕೆ ಮೂಲವನ್ನರಸಿ ಹೋದಾಗ
ಗಾಢಚಿಂತನೆ ಮೊಳೆತು ಕಾರ್ಯ-ಕಾರಣ ಬಂಧ
ಕೂಡುವುದು, ವಿಜ್ಞಾನದಾರಂಭವಿದು, ನೋಡಿ
ಮಾಡಿ ತಿಳಿಯುವ ತಂತ್ರ ಸಂಯಂತ್ರ ಅತ್ರಿಸೂನು ... ೧೦೫

ಸಂಕಲ್ಪದೃಢನಾಗಿ ಮೊದಲ ಹೆಜ್ಜೆಯನಿಟ್ಟು
ಸಂಕಷ್ಟಗಳ ಲೆಕ್ಕಿಸದೆ ಸದಾ ನಡೆಯುತಿರು
ಶಂಕೆತೊರೆ, ನಚಿಕೇತನೋಲ್ ಸತ್ಯದರ್ಶನಕೆ
ಕೈಂಕರ್ಯವೊಪ್ಪಿಸೋ ಜಯಸಿದ್ಧ ಅತ್ರಿಸೂನು ... ೧೦೬

ವೇದಿಕೆಯನೇರಬೇಕೆಂಬಾಸೆಯೆನಗಿಲ್ಲ
ಮಾದಕ ಪ್ರಶಂಸೆಯ ನಿರೀಕ್ಷಿಸುವ ದೌರ್ಬಲ್ಯ-
ದಾಧಿಕ್ಯ ಬಾಧಿಸದು ನನ್ನ, ನಾನೊಲಿದಿರುವ
ಹಾದಿಯಲ್ಲೊಂಟಿನಡೆ ನನಗಿಷ್ಟ ಅತ್ರಿಸೂನು ... ೧೦೭

ನಯವಿನಯ ಮಧುರತೆ ಮನೋಧರ್ಮ ಹದದಿ ಸಂ-
ಲಯಿಸಿ ನೀವಾಗಿಹಿರಿ! ಮೋಡಗಳ ನಾಡಾಚೆ
ಭಯರಹಿತ ಪರಿಶುದ್ಧ ಸೌಂದರ್ಯ ತೋರಿದಿರಿ
ಶಯನಿಸಿದ ಕಾಲವಿದನಾಲಿಸುತ ಅತ್ರಿಸೂನು ... ೧೦೮

ಶ್ರೀಕಂಠ ನಾಮಕಂ ಗಾನಮಂ ಪಾಡಿದರೆ
ಶ್ರೀಕರಂ ಮೆಚ್ಚುವಂ ಧರೆಯೊಳೇ ಸೃಷ್ಟಿಪಂ
ನಾಕಮಂ, ಗಂಧರ್ವರಾವಾಸವಂ, ನಿಜಕು
ಪ್ರಾಕಾರವಿಲ್ಲದಾ ವೈಭವಂ ಅತ್ರಿಸೂನು ... ೧೦೯

ವಾಸುದೇವಾಚಾರ್ಯರಿಗೆ ನಮನ: ಮೆರೆಸಿಹಿರಿ
ಮೈಸೂರ ಹಿರಿಮೆಯನು ಗಾನಪ್ರಪಂಚದಲಿ
ಮಾಸದೆಂದೂ ನಿಮ್ಮ ಕೀರ್ತಿ, ಹರಿಸಿಹಿರಿ ಪೀ-
ಯೂಷ ಪ್ರವಾಹವನ್ನೀ ನೆಲದಿ ಅತ್ರಿಸೂನು ... ೧೧೦

ವೇದವೇ ನಾದವೇ ಶ್ರೇಷ್ಠತರ? ನಡೆದನವ
ವೇದಮಾರ್ಗದಿ ಮುಂದೆ, ನಡೆದನಿವ ಛಲದಿಂದ
ನಾದಮಾರ್ಗವ ಹಿಡಿದು – ಭೇದರಹಿತಾಭಿನ್ನ
ನಾದವೇದಂಗಳೆಂದರಿತರೋ ಅತ್ರಿಸೂನು ... ೧೧೧

ನಶ್ವರದ ಹೃದಯಾಂತರಾಳದಲಿ ಹುದುಗಿರುವ
ಶಾಶ್ವತವನಾವಿಷ್ಕರಿಸುವಾತ ಯುಗಪುರುಷ,
ವಿಶ್ವಸೂತ್ರಗಳ ತಾ ದರ್ಶಿಸುತ ಬಿತ್ತರಿಪ
ಈಶ್ವರಾಂಶಂ, ನೈಜ ದಾರ್ಶನಿಕ ಅತ್ರಿಸೂನು ... ೧೧೨

ಮಿಥ್ಯಾ ನಿರೀಕ್ಷೆಗಳ ಬೆಂಬತ್ತಿ ಮಸುಳದಿರು
ಸತ್ಯಸಾಧನೆಗಿಲ್ಲವೆಲ್ಲಿಯೂ ಒಳದಾರಿ
ಕರ್ತವ್ಯನಿರ್ವಹಣೆಯಲಿ ಜಗವ ಮರೆತು ಔ-
ನ್ನತ್ಯಕೇರುತಿರು, ಹಿಂತಿರುಗದಿರು ಅತ್ರಿಸೂನು ... ೧೧೩

ತಾಬೆದಾರಿಕೆ ನೊಗಕೆ ಹೆಗಲೊಡ್ಡಿ ನವೆದೆ, ಸಾ-
ಹೇಬನಾ ಮರ್ಜಿಗನುಗುಣವಾಗಿ ನರ್ತಿಸಿದೆ
ಸ್ವಾಭಿಮಾನವ ತುಳಿದ, ಸ್ವಾತಂತ್ರ್ಯರಿಕ್ತ ಬದು-
ಕಾ ಬರಡು ಬಂಜರಿನ ಬಂಡೆಯೋ ಅತ್ರಿಸೂನು ... ೧೧೪

ಸಾಹಿತ್ಯ-ಸಂಗೀತ-ಸೃಜನಶೀಲತೆ ಬೆರೆತು
ಐಹಿಕಾಮುಷ್ಮಿಕಾತೀತ ಔನ್ನತ್ಯದಲಿ
ಸಾಹಸವಿಹಾರ ಪ್ರದರ್ಶಿಸುವುದೇಂ ಚೋದ್ಯ!
ದೇಹ-ಮನವಾಗಿಹವು ಮಾಧುರ್ಯ ಅತ್ರಿಸೂನು ... ೧೧೫

ಮುಕ್ತಕದ ವಿಸ್ತಾರಕುಂಟೆ ಮಿತಿ? ಅವನವನ
ಶಕ್ತಿಗೊಪ್ಪುವ ತೆರದೊಳನುಭವಾಮೃತವ ಚಾ-
ಟೂಕ್ತಿಯಲಿ ಬಿತ್ತರಿಪ ಕಾವ್ಯಪ್ರಕಾರವದು
ಮುಕ್ತಿ ಪಡೆಯಲು ನಂಬು ಮುಕ್ತಕವ ಅತ್ರಿಸೂನು ... ೧೧೬

ಸಂಗೀತ ಸಿದ್ಧಿಪುದೆ ತಂತ್ರದಿಂ? ವೇಗದಿಂ?
ಅಂಗಭಂಗಿಗಳಿಂ? ಸಮೀಪಿಸದು ಹಿಂಸಕನ!
ಸಾಂಗತ್ಯವಂತರಾತ್ಮದೊಳಿದ್ದು ಸಂತೃಪ್ತಿ
ಸಂಗಳಿಸಲುಜ್ಜ್ವಲಿಪ ದೀಪ್ತಿಯದು ಅತ್ರಿಸೂನು ... ೧೧೭

ಮಕ್ಕಳಲಿ ಕಾಣು ನಿನ್ನಾಸೆ ಪೂರೈಕೆಯನು
ಕಕ್ಕುಲತೆಯಿಂ ಬೆಳೆಸಿ ಮಾರ್ಗದರ್ಶಕನಾಗೆ
ಸಕ್ಕರೆಗೆ ತುಪ್ಪ ಬೆರೆತಂತಕ್ಕು ಬಾಳು ಸಾ-
ರ್ಥಕ್ಯವೈದುವುದಲ್ಲಿ – ಶುಭಮಕ್ಕೆ! ಅತ್ರಿಸೂನು ... ೧೧೮

ಅರವಟ್ಟಿಗೆಯಿದೆ ಮಜ್ಜಿಗೆಯಿಲ್ಲ, ಮೌಲ್ಯಗಳು
ಮರಣಿಸಿವೆ, ಪರಪುಟ್ಟ ಸಿರಿವಂತ ಮಂದಿಯದೆ
ಮೆರವಣಿಗೆ – ನೆಲತಾಯಿ ಬೋಳು, ಬಡವರ ಗೋಳು
ಕುರುಡ ಕಿವುಡರರಿವಿಗೆ ಬರುವುದೇ? ಅತ್ರಿಸೂನು ... ೧೧೯

ಬಯಲಿನಲಿ ವಾಸಿಸಲು ಕೆಚ್ಚೆರದ ಹೇಡಿ ಆ-
ಲಯಕಟ್ಟಿ ತಳೆಯುವನು ಭರವಸೆ. ಪರೀಕ್ಷಿತನ
ಲಯವೀವ ಸಂದೇಶ: ಋಜುಭಿತ್ತಿ ನೈತಿಕತೆ,
ಮಯರಚಿತ ಮನೆಮಂದಿರಗಳಲ್ಲ ಅತ್ರಿಸೂನು ... ೧೨೦

ಆರಾಧನೆಯ ಮಾಡಿಗಳ ಹಿಸುಕಬೇಡಿರೋ
ನಾ ರೂಪಿಸಿದ ಹಾದಿಯ ಪರಾಂಬರಿಸಿ ನಿಮ್ಮ
ದಾರಿಯನು ಕಾಣಿರೋ – ಜ್ಞಾನಗಿರಿಯೈದುವೊಡೆ
ನೂರಾರು ಪಥಗಳಿವೆ ತಿಳಿಯಿರೋ ಅತ್ರಿಸೂನು ... ೧೨೧

ಅಪರಂಜಿ ಕೈಯಲಿದೆ ಹುಡುಕುತಿಹೆ ಬೇರೆಲ್ಲೊ
ಕಪಿಪುಂಗವನ ನಿಷ್ಠೆ ರೂಢಿಸಿಕೊ, ನೀಗೈವ
ಜಪ ತಪಂಗಳು ನಿನ್ನೊಳಗಿಹ ನಿಧಿ ಶೋಧಿಸಲಿ
ತಪನ ಸಾಮ್ರಾಜ್ಯವೇ ನಿನ್ನದೋ ಅತ್ರಿಸೂನು ... ೧೨೨

ಗಾಢಾಂಧಕಾರದಾ ಮೌನದಲಿ ವ್ಯೋಮನ ನಿ-
ಗೂಢತೆಗೆ ಶರಣಾಗಿ ನಾನುತನವಳಿದಾಗ
ಮೂಡುವುದು ಕಾವ್ಯ, ಬದುಕಿಗೆ ಬರೆದ ಭಾಷ್ಯ, ಆ-
ಷಾಢದಲಿ ತಪನ ತೇಜದ ಲಾಸ್ಯ ಅತ್ರಿಸೂನು ... ೧೨೩

ಪರಿಶುದ್ಧ ಗಾಯನಕೆ ಶರಣಾಗು ನೀಬೆಳೆವೆ
ಪರಿಪರಿಯ ಆಮಿಷಕೆ ಮರುಳಾಗು ನೀನಳಿವೆ
ಗುರಿಯಿರಲಿ ನಕ್ಷತ್ರ, ನಡೆಯಿರಲಿ ತಿರೆ ಮೇಲೆ
ತೆರೆಯುವರು ಕದ ವಾಣಿ-ಲಕ್ಷ್ಮಿಯರು ಅತ್ರಿಸೂನು... ೧೨೪

ಅಚ್ಚುಸಾಲೆಗಳುಂಟು ವೆಚ್ಚಕ್ಕೆ ಹೊನ್ನುಂಟು
ಕೊಚ್ಚೆಯಲಿ ಮಚ್ಚರಿಪ ಹಂದಿಗಳ ಹಿಂಡುಂಟು
ಕಚ್ಚಡವ ಪೇರಿಡಲು ಗ್ರಂಥಾಲಯಗಳುಂಟು
ಹುಚ್ಚರೀ ಸಂತೆಯಲಿ ಬೆಳಕುಂಟೆ? ಅತ್ರಿಸೂನು ... ೧೨೫

ಕಾಂಕ್ರೀಟು ಕಾಡಿನಲಿ ಬತ್ತಿದುದು ನೀರ ನೆಲೆ
ಸಂಕೀರ್ಣ ಜೀವನದಿ ಹಿಂಗಿದುದು ಹೃದಯ ಸೆಲೆ
ಹೂಂಕಾರದಾರ್ಭಟೆಗೆ ಮಂಕಾಯ್ತು ಓಂಕಾರ –
ಸಂಕಷ್ಟ ಭಸ್ಮಾಸುರನ ಹಸ್ತ ಅತ್ರಿಸೂನು ... ೧೨೬

ಅನುಭವಕೆ ನುಡಿಯೊಡಲ ಕೊಡಲು ಪ್ರಯತ್ನಿಸುವೆ-
ನನವರತ ದೊರೆವುದಾನಂದವೆನಗೀ ಪಥದಿ
ಮನಕೊಪ್ಪಿದರೆ ನಿನಗೆ ಸ್ವೀಕರಿಸು – ಹಕ್ಕಿ ಹಾ-
ಡನು ಬಂಧಿಸುವ ಧೋರಣೆಯ ಬಿಡೆಲೊ ಅತ್ರಿಸೂನು ... ೧೨೭

ಚುಟುಕೆಂದರೇನು? ಅದು ವಿಸ್ತಾರ ಕಾವ್ಯದಾ
ಗುಟುಕು, ಜೀವನ ರಹಸ್ಯಗಳ ಸಂಕ್ಷಿಪ್ತ
ಚಿಟಿಕೆ ಕಾಣ್, ಪರಮಾಣು-ವಿಶ್ವಸಂಬಂಧವದು
ಕಿಟಕಿ ತೆರೆ ತಿಳಿಯುವೆಯದರ ಹರವು ಅತ್ರಿಸೂನು... ೧೨೮

## 'ವೈದ್ಯವಾರ್ತಾ ಪ್ರಕಾಶನ'ದ ಪ್ರಕಟಣೆಗಳು

| | | |
|---|---|---|
| (1) | ಆಯುರ್ವೇದದಲ್ಲಿ ಸಂಶೋಧನೆ ಅಗತ್ಯವೇ? | ಡಾ. ಎಂ.ಜಿ.ಆರ್. ಅರಸ್ |
| (2) | ಶಿವಾಂಬು ಪಾನೀಯ | ಡಾ. ಎಸ್.ಎಫ್ ಹಿರೇಮಠ್ |
| (3) | ಪಂಡಿತ್ ತಾರಾನಾಥ | ಡಾ. ಎಂ.ಜಿ.ಆರ್. ಅರಸ್ |
| (4) | ಪಾರ್ಥನಾರಾಯಣ ಪಂಡಿತ್ | ಡಾ. ಎಂ.ಜಿ.ಆರ್. ಅರಸ್ |
| (5) | ಕ್ಷೇಮ | ಡಾ. ರಾಜೇಂದ್ರ |
| (6) | ಪ್ರೇಮ ಸಿಂಚನ | ಕೀರ್ತಿಕುಮಾರ್ |
| (7) | ನಿವೇದನೆ | ಗೀತಾ ಮಹದೇವ ಪ್ರಸಾದ್ |
| (8) | ಒಡಲಬೇಗೆ | ಬಿ.ಟಿ. ಲಲಿತಾನಾಯಕ್ |
| (9) | ಸಗ್ಗದ ಬೇರಿಗೆ | ಪ್ರೊ. ಸುಜನ |
| (10) | ಅಕಬರ ಅಲಿ ಚುಟುಕುಗಳು | ಡಾ. ಎಂ.ಜಿ.ಆರ್. ಅರಸ್ |
| (11) | ಚದುರಂಗ ಚುಟುಕುಗಳು | ಡಾ. ಎಂ.ಜಿ.ಆರ್. ಅರಸ್ |
| (12) | ಸಿ.ಪಿ.ಕೆ. ಚುಟುಕುಗಳು | ಡಾ. ಎಂ.ಜಿ.ಆರ್. ಅರಸ್ |
| (13) | ಎಚ್ಚೆಸ್ಕೆ ಚುಟುಕುಗಳು | ಡಾ. ಎಂ.ಜಿ.ಆರ್. ಅರಸ್ |
| (14) | ವೈಶಾಖದ ವೈವಿಧ್ಯ | ಡಾ. ಎಂ.ಜಿ.ಆರ್. ಅರಸ್ |
| (15) | ಚದುರಂಗ-80 | ಡಾ. ಎಂ.ಜಿ.ಆರ್. ಅರಸ್ |
| (16) | ಮಾದಕ ಲೋಕ | ಡಾ. ರಾಜೇಶ್ವರ್ |
| (17) | ನಿರ್ಗಮನ | ಸರೋಜ ಕೃಷ್ಣಮೂರ್ತಿ |

| | | |
|---|---|---|
| (18) | ರಾಯರ ವಠಾರ | ಡಾ. ಸಿ.ಕೆ.ಎನ್. ರಾಜ |
| (19) | ಜಾಲಾರಿ | ಡಾ. ಎಲ್. ಬಸವರಾಜು |
| (20) | ಸೆಳವು | ವಿಶ್ವನಾಥ್ |
| (21) | ಕೆಂಡಸಂಪಿಗೆ | ಉಮಾದೇವಿ ಅಂಗಡಿ |
| (22) | ಸಂಧ್ಯಾ ಕವಿತೆಗಳು | ಸಂಧ್ಯಾ |
| (23) | ಕಚಗುಳಿ | ವಿಜಯ ಹೆಮ್ಮಿಗೆ |
| (24) | ಮೌನಧ್ವನಿ | ದ್ವಾರಕಾನಾಥ್ |
| (25) | ದೇಜಗೌ ಚುಟುಕುಗಳು | ಡಾ. ದೇಜಗೌ |
| (26) | ದೇಜಗೌ ಸೂಕ್ತಿಗಳು | ಡಾ. ದೇಜಗೌ |
| (27) | ಚುಟುಕು ಮಹಾಕವಿ ಸರ್ವಜ್ಞ | ಡಾ. ದೇಜಗೌ |
| (28) | ನಿತ್ಯ ಸಾಹಿತ್ಯೋತ್ಸವ | ಡಾ. ದೇಜಗೌ |
| (29) | ಎಚ್ಚೆಸ್ಕೆ ಆಯ್ದ ಬರಹಗಳು | ಡಾ. ಎಂ.ಜಿ.ಆರ್. ಅರಸ್ |
| (30) | ಎಚ್ಚೆಸ್ಕೆ ಬರಹಗಳಲ್ಲಿ ಕುವೆಂಪು | ಡಾ. ಎಂ.ಜಿ.ಆರ್. ಅರಸ್ |
| (31) | ದೇವ ಜೀವ ಜಗತ್ತು | ಪ್ರೊ. ಎಚ್ಚೆಸ್ಕೆ |
| (32) | ಅಕಬರ ಅಲಿ ಆಯ್ದ ಬರಹಗಳು | ಡಾ. ಎಂ.ಜಿ.ಆರ್. ಅರಸ್ |
| (33) | ಅಕಬರ ಅಲಿ ಆಯ್ದ ಚುಟುಕುಗಳು | ಡಾ. ಎಂ.ಜಿ.ಆರ್. ಅರಸ್ |
| (34) | ಚುಟುಕು ವೈಶಾಖ | ಡಾ. ಎಂ.ಜಿ.ಆರ್. ಅರಸ್ |
| (35) | ಚುಟುಕು ಮಲ್ಲಿಗೆ | ಡಾ. ಎಂ.ಜಿ.ಆರ್. ಅರಸ್ |

(36) ಚುಟುಕು ಚೈತ್ರ — ಡಾ. ಎಂ.ಜಿ.ಆರ್. ಅರಸ್

(37) ಚುಟುಕು ಬೆಳಕು — ಡಾ. ಎಂ.ಜಿ.ಆರ್. ಅರಸ್

(38) ಚುಟುಕು ಸಾಹಿತ್ಯ ವಿಮರ್ಶೆ — ಡಾ. ಎಂ.ಜಿ.ಆರ್. ಅರಸ್

(39) ಪುರುಷರಲ್ಲಿ ಬಂಜೆತನ — ಡಾ. ಸಿ.ಎಸ್.ಕೆ.

(40) ಸಿ.ಎಸ್.ಕೆ. ಭಾಷಣಗಳು — ಡಾ. ಸಿ.ಎಸ್.ಕೆ.

(41) ಚುಟುಕು ಸಿರಿ — ಹೆಚ್.ಎಂ. ರಾಜಪ್ಪಗೌಡ

(42) ಚುಟುಕು ವರ್ಷಿಣಿ — ತೇಜಸ್ವಿನಿ ದೇವಿ ಅರಸ್

(43) ಅರ್ಬುದ 101 ಪ್ರಶ್ನೆಗಳು — ಡಾ. ಎಂ.ಜಿ.ಆರ್. ಅರಸ್

(44) ಚುಟುಕು ವಿಳಾಸ ಸೂಚಿ — ಡಾ. ಎಂ.ಜಿ.ಆರ್. ಅರಸ್

(45) ಚುಟುಕು ಮಂದಾರ — ಎ. ರಾಮದಾಸ್, ಎಂ.ಎಲ್.ಎ.

(46) ಅರ್ಶಸ್ ೧೦೧ — ಡಾ. ಎಂ.ಜಿ.ಆರ್. ಅರಸ್

(47) ಚುಟುಕು ನೆಲೆ ಬೆಲೆ — ಎ.ಎಸ್. ಗುರುಸ್ವಾಮಿ, ಎಂ.ಎಲ್.ಎ.

(48) ಚುಟುಕು ಶ್ರಾವಣ — ಎ.ಎಸ್. ಗುರುಸ್ವಾಮಿ, ಎಂ.ಎಲ್.ಎ.

(49) ಎಚ್ಚೆತ್ತ ಲಿಪಿ — ಡಾ. ಎಂ.ಜಿ.ಆರ್. ಅರಸ್

(50) ಸಹಜ ರಾಜಯೋಗ — ಡಾ. ಎಸ್.ಎಫ್. ಹಿರೇಮಠ್

(51) ವಿ.ಗ.ನಾ. ಚುಟುಕುಗಳು — ಡಾ. ಎಂ.ಜಿ.ಆರ್. ಅರಸ್

(52) ಮಲ್ಲಿಗೆಯ ಮೊಗ್ಗು — ಡಾ. ಎಂ.ಜಿ.ಆರ್. ಅರಸ್

(53) ಬೆಳಕಿನ ಆರಾಧನೆ ಡಾ. ಎಂ. ಅಕಬರ ಅಲಿ

(54) ಸ್ತ್ರೀಯರಲ್ಲಿ ಬಂಜೆತನ ಡಾ. ಸಿ. ಶರತ್‌ಕುಮಾರ್

(55) ಭೂಮಿ ಕಂಪಿಸಲಿಲ್ಲ ಶ್ರೀಕಾಂತ

(56) ಅಕಬರ ಅಲಿ ಸಮಗ್ರ ಕಾವ್ಯ ಡಾ. ಎಂ. ಅಕಬರ ಅಲಿ

(57) ದೇಜಗೌ ಕಾವ್ಯ ಸಂಕಲನ ಡಾ. ಎಂ. ಜಿ. ಆರ್. ಅರಸ್

(58) ಚಾಯಿಬಾಬಾ ಡಾ. ಎಲ್. ಬಸವರಾಜು

(59) ಎಚ್ಚೆಸ್ಕೆ ಚುಟುಕು ದರ್ಶನ ಡಾ. ಎಂ.ಜಿ.ಆರ್. ಅರಸ್

(60) ಡಾಕ್ಟರ್ ಬಾಪ ಚುಟುಕುಗಳು ಡಾ. ರಿಯಾಜ್ ಬಾಷ

(61) ಬಿ.ಟಿ. ಲಲಿತಾನಾಯಕ್ ಆಯ್ದ ಚುಟುಕುಗಳು ಡಾ. ಎಂ.ಜಿ.ಆರ್. ಅರಸ್

(62) ಕೀಚಕರು ಡಾ. ಎಂ. ಜಿ. ಆರ್. ಅರಸ್

(63) ಕಾಯಬೇಕು ನಾಳೆಯವರೆಗೂ ಡಾ. ರಿಯಾಜ್ ಬಾಷ

(64) ಕುಲಪತಿ ಚುಟುಕುಗಳು ಡಾ. ಎಂ. ಜಿ. ಆರ್. ಅರಸ್

(65) ಚರ್ಮರೋಗಗಳು ಡಾ. ಹೆಚ್. ಹನುಮಂತಪ್ಪ

(66) ಚೆಂಡು ಹೂ ಗೊಂಡು ಪ್ರೊ. ಎಚ್ಚೆಸ್ಕೆ

(67) ಹರಳಯ್ಯ ವಿಜಯ / ಕ್ರಾಂತಿ ಕಹಳೆ ಡಾ. ದೇಜಗೌ

(68) ಸಾಧನೆಯ ಸರದಾರ ಡಾ. ದೇಜಗೌ

(69) ಜರಗನಹಳ್ಳಿ ಚುಟುಕುಗಳು ಡಾ. ಎಂ.ಜಿ.ಆರ್. ಅರಸ್



ಜಗತ್ತಿನಲ್ಲಿರುವುದು ಎರಡೇ ಗುಂಪುಗಳು: ಒಂದು ಸಿರಿವಂತರು; ಎರಡು ಕುರುಡ ಕಿವುಡರದು. ಸಿರಿವಂತರ ಕೊಳ್ಳೆ ಆಡಂಬರ ಯಾರಿಗೂ ಕಾಣಿಸದು; ಬಡವರ ಗೋಳು ಯಾರಿಗೂ ಕೇಳಿಸದು. 'ಹಾವು ತಿಂದವರ ನುಡಿಸಬಹುದು; ಗರ ಹೊಡೆದವರ ನುಡಿಸಬಹುದು; ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ!' ಎಂದು ಬಸವೇಶ್ವರರು ಶ್ರೀಮಂತರ ಅಹಂಕಾರವನ್ನು ಖಂಡಿಸುತ್ತಾರೆ. ಸೂಜಿಯ ಕಣ್ಣಿನಲ್ಲಿ ಒಂಟೆ ನುಸುಳಬಹುದಾದರೂ ಶ್ರೀಮಂತರಿಗೆ ಸ್ವರ್ಗದಲ್ಲಿ ಪ್ರವೇಶವಿಲ್ಲವೆಂದು ಕ್ರಿಸ್ತ ಸಹ ಸ್ಪಷ್ಟಪಡಿಸುತ್ತಾನೆ.

ನಾರಾಯಣರಾಯರು ಕುವೆಂಪು ಸಾಹಿತ್ಯವನ್ನು, ಮುಖ್ಯವಾ 'ಶ್ರೀರಾಮಾಯಣದರ್ಶನಂ ಮಹಾಕಾವ್ಯ'ವನ್ನು ಚೂಲಮೂಲವಾ ಅಧ್ಯಯನಮಾಡಿದವರು. ಅವುಗಳಲ್ಲಿ ಬರುವ ವೈಜ್ಞಾನಿಕ ಪ್ರಕರಣಗಳಿಗೆ ಇವ ಪೂರ್ಣಪ್ರಮಾಣದ ನಿಖರ ಭಾಷ್ಯಗಳನ್ನು ರಚಿಸಿದ್ದಾರೆ. ಮಾತ್ರವಲ್ಲ, ಅವರ ವಿಜ್ಞಾ ಗ್ರಂಥಗಳನ್ನು ಕುವೆಂಪು ಅವರೂ ಅವರ ಮಕ್ಕಳೂ ಓದಿ ಮೆಚ್ಚಿಕೊಂಡಿದ್ದಾರೆ. ಅವ ಅಸಾಧಾರಣ ವಿದ್ವತ್ತಿಗೆ ವಿಶ್ವಕೋಶ ಹಾಗೂ ಅವರ ಗ್ರಂಥಗಳೇ ಚಿರಂತನ ಸಾಕ್ಷಿಗಳಾ ಉಳಿಯುತ್ತವೆ. ರಾಯರ ವಿದ್ವತ್ತು ಸದಾ ಕನ್ನಡದ ಎಲ್ಲ ಮನೆ ಮನಗಳನ್ನು ಮುಟ್ಟಲೆಂದು ಹಾರೈಸುತ್ತೇನೆ.

ಚುಟುಕು ಸಾಹಿತ್ಯಕ್ಕೊಂದು ಸಿಂಹಾಸನವನ್ನು ನಿರ್ಮಿಸಿ, ಅದನ್ನು ಕರ್ನಾಟಕ ಉದ್ದಗಲಗಳಲ್ಲಿ ಮೆರೆಸಿ, ಮನೆ ಮನಗಳಿಗೆ ಮುಟ್ಟಿಸಿದ ಛಲ ಹಾಗೂ ಕೀರ್ತಿ ಎಂದು ಸೋಲರಿಯದ ಡಾ.ಎಂ.ಜಿ.ಆರ್. ಅರಸು ಅವರಿ ಸಲ್ಲಬೇಕು. ಅವರಿಗೆ ಮಾತ್ರವಲ್ಲ, ಅವರ ಕುಟುಂಬಕ್ಕೂ ಸಲ್ಲಬೇಕು. ಅವರು ತಮ್ಮ ವೈದ್ಯವಾರ್ತಾ ಪ್ರಕಾಶನ ಮುಖಾಂತರ ಈ ಕೃತಿಯನ್ನು ಪ್ರಕಟಿಸುತ್ತಿರುವುದು ಸಂತೋಷದ ಸಂಗತಿ. ಅವರಿಗೆ ನನ್ನ ಧನ್ಯವಾದಗಳು.

ಡಾ. ದೇಜಗ



ಡಾ. ಎಂ. ಜಿ. ಆರ್. ಅರಸ್

ಪ್ರಕಾಶಕ